## प्रास्ताविकम्

### ಎರಡನೆಯ ಪರಿಚ್ಛೇದದ ಸಾರ

ಎರಡನೆಯ ಪರಿಚ್ಛೇದದಲ್ಲಿ ಜೀವೇಶ್ವರರಿಗೆ ಭೇದವನ್ನು ಮತ್ತಿನ್ನಿತರ ಪ್ರಮಾಣಪ್ರಮೇಯಗಳ ವಿಮರ್ಶೆ ನಡೆಸಲಾಗಿದೆ.

★ **'ವಿಜ್ಞಾನಾದ್ಧ್ಯೇವ ಖಲ್ವಿಮಾನಿ'** ಎಂಬೀ ಶ್ರುತಿಯಲ್ಲಿ ಜೀವನಿಗೆ ಜಗತ್ಕರ್ತೃತ್ವ ಹೇಳಿರುವಾಗ, ಬ್ರಹ್ಮನಿಗೂ ಜೀವನಿಗೂ ಏನೂ ವ್ಯತ್ಯಾಸವಿಲ್ಲವೆಂದಾಯಿತು. ಬ್ರಹ್ಮನಿಗೂ ಕರ್ತೃತ್ವವಿದೆಯಲ್ಲವೇ? ಎಂಬ ಆಕ್ಷೇಪ. ಇದು ಸರಿಯಲ್ಲ, ಜೀವನು ಜಗತ್ಕರ್ತೃ ಎಂಬ ವಿಷಯ ಪ್ರತ್ಯಕ್ಷಾದಿಗಳಿಂದ ಬಾಧಿತ ಮತ್ತು ಹಾಗೆ ಪ್ರಸಿದ್ಧಿಯೂ ಇಲ್ಲ.

ಜೀವನಿಗೆ ಜಗತ್ಕರ್ತೃತ್ವಾದಿಗಳನ್ನು ಪ್ರತಿಪಾದಿಸುವ ವಾಕ್ಯ ಉಪಾಸನಾಪರವಾದುದು. ಉಪಾಸನಾಪರವಾಕ್ಯ ಮಿಥ್ಯಾಪ್ರತಿಪಾದಕವಾದುದು ಎಂದು ಪರರು ಹೇಳುವರು. ಹೀಗಾಗಿ ಇಲ್ಲಿ ಜೀವನಿಗೆ ಕರ್ತೃತ್ವಾದಿಗಳು ಹೇಳಲು ಸುತರಾಂ ಆಗುವುದಿಲ್ಲವೆಂದಂತಾಯಿತು.

★ **ಶ್ವೇತಾಶ್ವತರಶ್ರುತ್ಯರ್ಥ -**

**'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ'** ಎಂಬೀ ಶ್ವೇ.ಉ. ವಾಕ್ಯವು ಬ್ರಹ್ಮನಿಗೆ ಕಾರ್ಯಕಾರಣಭಾವವಿಲ್ಲ ಎನ್ನುತ್ತಿದೆ. ಅರ್ಥಾತ್ ಮಿಥ್ಯಾದಲ್ಲಿಯೇ ಪರ್ಯವಸಾನವಾದಂತಾಯಿತು.

ಉಪಸಂಹಾರದಲ್ಲಿ 'ನಿಷ್ಕಲಂ ನಿಷ್ಕ್ರಿಯಂ ಶಾಂತಂ' ಎಂದು ಬ್ರಹ್ಮನಿಗೆ ನಿಷ್ಕ್ರಿಯತ್ವವೆಂಬ ಧರ್ಮ ಹೇಳಿದೆ. ಆದ್ದರಿಂದ 'ನ ತಸ್ಯ ಕಾರ್ಯಂ' 'ನಿಷ್ಕ್ರಿಯಂ' ಎಂಬ ವಾಕ್ಯಗಳ ಅರ್ಥವಿಚಾರ ನೋಡಿದಾಗ ನಿಷೇಧವು ಕಂಡಿದೆ. ಹೀಗಾಗಿ 'ಪರಾಸ್ಯ ಶಕ್ತಿಃ' ಎಂಬ ಶ್ರುತಿವಾಕ್ಯದ ದೆಸೆಯಿಂದಲೂ, ನಿಷೇಧ ಎಂದರೆ ಬ್ರಹ್ಮನಿಗೆ ಮಾಯಾಶಕ್ತಿ ಇದೆ ಎಂಬರ್ಥದಲ್ಲೇ ಪರ್ಯವಸಾನವಾಗುತ್ತದೆ. ಎಂದಿಷ್ಟು ಪರರು ನೀಡಿದ ಅಭಿಪ್ರಾಯ. ಇದು ಸರಿಯಲ್ಲ, ಏಕೆ?

ಶ್ರುತಿಯ ಉಪಕ್ರಮದಲ್ಲಿ 'ಕಿಂ ಕಾರಣಂ ಬ್ರಹ್ಮ' ಎಂದು ಬ್ರಹ್ಮನಿಗೆ ಕಾರಣವಾದುದು ಯಾವುದು? ಎಂದು ಪ್ರಶ್ನೆ ಮಾಡಿಕೊಂಡು ಅನಂತರ 'ತೇ ಧ್ಯಾನಯೋಗಾನುಗತಾ ಅಪಶ್ಯನ್' ಎಂದು ಬ್ರಹ್ಮನನ್ನು ತಿಳಿದವರಿಗೆ ಬ್ರಹ್ಮನು ವಿಷಯನಾಗಿರುವ ಎನ್ನುತ್ತಾ 'ದೇವಾತ್ಮಶಕ್ತಿಂ' ಎಂದು ಬ್ರಹ್ಮನ ಸ್ವಾಭಾವಿಕಶಕ್ತಿಯನ್ನು ಉಪಕ್ರಮದಲ್ಲೇ ಹೇಳಿರುವುದರಿಂದ, 'ಬ್ರಹ್ಮನ ಸ್ವಾಭಾವಿಕಶಕ್ತಿ' ಎಂದರ್ಥ ಹೇಳಬೇಕೇ ಹೊರತು 'ಮಾಯಾಶಕ್ತಿ' ಎಂಬರ್ಥ ಹೇಳಲು ಆಗುವುದಿಲ್ಲ. 'ಮಾಯಾಶಕ್ತಿ' ಎಂಬರ್ಥವಿದ್ದ ಪಕ್ಷದಲ್ಲಿ 'ದೇವಶಕ್ತಿಂ' ಎಂದಿಷ್ಟೇ ಪದ ಸಾಕಾಗುತ್ತಿತ್ತು. ಆತ್ಮಶಬ್ದ ವ್ಯರ್ಥವಾದೀತು! ಕೋಶದಲ್ಲಿ ಆತ್ಮಶಬ್ದಕ್ಕೆ ಸ್ವಭಾವ ಎಂಬರ್ಥವಿರುವುದರಿಂದಲೂ ಇಲ್ಲಿ ದೇವಾತ್ಮಶಕ್ತಿಂ = ಪರಮಾತ್ಮನು ತನ್ನ ಸ್ವಾಭಾವಿಕಶಕ್ತಿಯನ್ನು ಎಂದು ಹೀಗೆಯೇ ಅರ್ಥ ಪರ್ಯವಸಾನವಾಗುತ್ತದೆ.

★ ಇದೇ ರೀತಿ ಮುಂದೆಯೂ ಶ್ರುತಿಯಲ್ಲಿ 'ಅಸ್ಮಾನ್ಮಾಯೀ ಸೃಜತೇ' ಎಂದು ಮಾಯಾಶಬ್ದವಿದೆ. ಇದು 'ಮಿಥ್ಯಾ' ಎಂಬರ್ಥದಲ್ಲಿ ಪರ್ಯವಸಾನವಾಗುತ್ತದೆ. ಸ್ವಾಭಾವಿಕಶಕ್ತಿಪರವಲ್ಲ ಎಂಬ ಆಕ್ಷೇಪಕ್ಕೆ ವಿಜಯೀಂದ್ರರು ಕೊಟ್ಟ ಸಮಾಧಾನ ಇಂತಿದೆ -

'ಮಾಯಾ' ಶಬ್ದಕ್ಕೆ ಪ್ರಕೃತಿ ಎಂಬರ್ಥದಲ್ಲಿ ಪ್ರಯೋಗವಿದೆ. ಅರ್ಥಾತ್ ಸ್ವಾಭಾವಿಕವಾದುದು ಎಂಬರ್ಥದಲ್ಲಿ ಪರ್ಯವಸಾನವಾಗುತ್ತದೆ.

ಪ್ರಕೃತ್ಯಾ ಚಾರು = ಸ್ವಾಭಾವಿಕವಾಗಿ ಸುಂದರವಾದುದು ಎಂಬ ಪ್ರಯೋಗ ಲೋಕದಲ್ಲಿ ಕಂಡಿದೆ. ಇಲ್ಲಿ ಪ್ರಕೃತಿಶಬ್ದಕ್ಕೆ ಸ್ವಾಭಾವಿಕ ಎಂಬರ್ಥ ಹೇಗೋ ಹಾಗೆಯೇ ಶ್ರುತಿಯಲ್ಲಿಯೂ ಮಾಯಯಾ = ಸ್ವಾಭಾವಿಕಶಕ್ತಿಯಿಂದ ಎಂದರ್ಥ ಹೇಳುವುದು ಉಚಿತವು.

ಹೀಗಾಗಿ ಮಿಥ್ಯಾ ಎಂಬರ್ಥ ಹೇಳಲಾಗುವುದಿಲ್ಲ.

ವಿಜಯೀಂದ್ರರು ಕೊಟ್ಟ ಮತ್ತೊಂದು ಯುಕ್ತಿ –

ನ ತಸ್ಯ ಕಾರ್ಯಂ ಎಂದುಶ್ರುತಿಯು ಈಶ್ವರನಿಗೆ ಸೃಷ್ಟ್ಯಾದಿಗಳಿಂದ ಪ್ರಯೋಜನವೇನಿಲ್ಲ ಎನ್ನುತ್ತಿದೆಯೇ ಹೊರತು ಸ್ವರೂಪತಃ ಕಾರ್ಯಕಾರಣಭಾವ ಇಲ್ಲ ಎಂದೇನೂ ಹೇಳುತ್ತಿಲ್ಲ. ಒಂದು ವೇಳೆ ಕಾರ್ಯಕಾರಣವಿಲ್ಲ ಎಂದಾಗಿದ್ದರೆ ಆಗ 'ಯತೋ ವಾ ಇಮಾನಿ' 'ನಾಮರೂಪೇ ವ್ಯಾಕರೋತ್' ಇತ್ಯಾದಿ ಶ್ರುತಿಗಳಲ್ಲಿ ರೂಪ, ಕಾರ್ಯ ಇವುಗಳಿಗನುಕೂಲವಾದ ಕ್ರಿಯೆ ಹೇಳಿದ್ದುದರ ವಿರೋಧ ಬರುತ್ತದೆ. 'ಲೋಕವತ್ತು ಲೀಲಾಕೈವಲ್ಯಮ್' ಎಂಬ ಸೂತ್ರದಲ್ಲೂ ಸೂತ್ರಕಾರರಾದ ಶ್ರೀವೇದವ್ಯಾಸರು ಈಶ್ವರ ಕ್ರಿಯೆ ಸ್ವಾಭಾವಿಕಲೀಲೆಗೋಸ್ಕರ ಎಂದಿದ್ದಾರೆ.

ಲೋಕದಲ್ಲಿ ಮತ್ತೊಬ್ಬರಿಗೆ ಪ್ರಯೋಜನದ ಉದ್ದೇಶವಿಟ್ಟುಕೊಂಡೇ ಯಾವಾಗಲೂ ಪ್ರವೃತ್ತಿಮಾಡುವವರನ್ನು 'ಇವರಿಗೇನು ಬೇರೆ ಕೆಲಸವಿಲ್ಲ' ಎಂದು ವ್ಯವಹಾರ ಮಾಡುವುದು ಕಂಡಿದೆ. ಅದರಂತೆ ಈಶ್ವರನೂ ಸದಾ ಮತ್ತೊಬ್ಬರ ಪ್ರಯೋಜನಕ್ಕಾಗಿಯೇ ಪ್ರವೃತ್ತಿಸುವವ. ಆದ್ದರಿಂದಲೇ ಶ್ರುತಿ ಹೇಳಿದ್ದು 'ನ ತಸ್ಯ ಕಾರ್ಯಂ ಕರಣಂ' ಎಂದು.

ಹೊಲದಲ್ಲಿ ದುಡಿಯುವ ರೈತನಿಗೆ ದೈವವಶಾತ್ ಫಸಲು ಆಗದಿದ್ದರೆ, ಆಗ 'ಕೃಷಿಯಲ್ಲಿ ಪ್ರವೃತ್ತಿ ಮಾಡದಿರುವವ' ಎಂದು ವ್ಯವಹರಿಸುವುದೂ ಈ ನಿಟ್ಟಿನಲ್ಲೇ.

ಉಪಸಂಹಾರದ 'ನಿಷ್ಕಲಂ ನಿಷ್ಕ್ರಿಯಂ' ಎಂಬೀ ವಾಕ್ಯಕ್ಕೆ ಹೀಗೆ ಅರ್ಥೈಸಬೇಕು. ಈಶ್ವರನಿಗೆ ನಮ್ಮಗಳಿಗಿಂತ ಅಸಾಧಾರಣಕಾರ್ಯವಿದೆ. ಆದ್ದರಿಂದ 'ನಿಷ್ಕ್ರಿಯ' ಎಂದರ್ಥ. ಸರ್ವಥಾ ಕ್ರಿಯೆಯಿಲ್ಲ ಎಂದರ್ಥೈಸಿದರೆ ಆಗ 'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಎಂಬ ಈಶ್ವರನ ಕ್ರಿಯೆ ಸ್ವಾಭಾವಿಕ ಎನ್ನುವ ಶ್ರುತಿಗೆ ವಿರೋಧ ಬರುತ್ತದೆ. ಈ ಶ್ರುತಿಗೆ ವಿರೋಧಬಾರದಂತೆ ಹೀಗೆ ಅರ್ಥೈಸುವುದು ಯುಕ್ತವು.

★ ಭಗವದ್ಗೀತಾ ವಿಚಾರ –

ಶ್ರೀಕೃಷ್ಣನು ಉಪದೇಶಿಸಿದ ಗೀತಾದಲ್ಲಿ ''ನ ಕರ್ತೃತ್ವಂ ನ ಕರ್ಮಾಣಿ'' (5.15) ಇತ್ಯಾದಿಯಾಗಿ ಕರ್ತೃ-ಕರ್ಮಭಾವವಿಲ್ಲ ಎಂದು ತಿಳಿಯುವುದರಿಂದ ಜಗತ್ಕರ್ತೃತ್ವಾದಿಗಳು ಮಿಥ್ಯೆ ಎಂದಾಯಿತು ಎಂಬ ಕೆಲವರ ವಾದವೂ ಸರಿಯಲ್ಲ. ಏಕೆ?

ಈ ವಾಕ್ಯ ಹೊರಟಿದ್ದು ಆಆ ಜೀವರುಗಳ ಅನಾದಿಯಾದ, ಅವರವರ ಕರ್ಮಕ್ಕನುಸಾರವಾಗಿ ಈಶ್ವರನು ಪ್ರವೃತ್ತಿಸುತ್ತಾನೆ ಹೊರತು ಕೆಲವರ ಇಷ್ಟಕ್ಕಾಗಿ, ಕೆಲವರ ಅನಿಷ್ಟಕ್ಕಾಗಿ ಪ್ರವೃತ್ತಿಸುತ್ತಾನೆ ಎಂಬರ್ಥದಲ್ಲಲ್ಲ. 'ಸರ್ವಮೇತದ್ ಋತಂ ಮನ್ಯೇ' ಎಂದು ಪರಮಾತ್ಮನಿಗೆ ಜಗತ್ಕಾರಣತ್ವಾದಿಗಳನ್ನು ಪ್ರತಿಪಾದಿಸುವ ವಾಕ್ಯಕ್ಕೆ ವಿರೋಧಿಯಾಗಿ ಅರ್ಥೈಸಬಾರದು. ಸದಸದ್ವೈಲಕ್ಷಣ್ಯಮಾತ್ರಪರವಾಗಿಯೂ ಕಲ್ಪಿಸಬಾರದು. ಹೀಗೆ ನಾವು ಹೇಳಿದಂತೆ ಅರ್ಥೈಸದಿದ್ದರೆ ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ಎಂಬೀ ಸೂತ್ರವಿರುವ ಅಧಿಕರಣದ ವಿರೋಧ ಬರುತ್ತದೆ. ಹೀಗಾಗಿ ಜಗತ್ಕರ್ತೃತ್ವಾದಿಗಳು ಮಿಥ್ಯೆ ಎನ್ನಲಾಗುವುದಿಲ್ಲವೆಂಬುದು ಉಪಪನ್ನವಾಗುತ್ತದೆ.

'**ನಾಮಬ್ರಹ್ಮೇತ್ಯುಪಾಸೀತ**' '**ಯೋಷಿತಮಗ್ನಿಂ ಧ್ಯಾಯೀತ**' ಎಂದು ಶ್ರುತಿಯಲ್ಲಿ ಉಪಾಸನಾವನ್ನು ಹೇಳಿದ್ದಾರೆ. 'ನಾಮ' 'ಯೋಷಿತ್' ಇತ್ಯಾದಿಗಳು ಬಾಧಿತವಾದುದು. ಅಸತ್ತಾದ ವಸ್ತುವನ್ನು ತಿಳಿಸಿಕೊಡುವುದು ಎಂದು ಇಚ್ಛೆ ಇಲ್ಲದಿದ್ದರೂ ಒಪ್ಪಬೇಕು ಎಂಬ ವಾದವಿದೆ. ಇದು ತಪ್ಪು. ಏಕೆ?

'**ನಾಮ ಬ್ರಹ್ಮೇತ್ಯುಪಾಸೀತ**' ಎಂಬಲ್ಲಿ 'ವಿಜ್ಞಾನ ಮೊದಲಾದ ನಾಮದಲ್ಲಿ ಬ್ರಹ್ಮನನ್ನು ಉಪಾಸಿಸಬೇಕು' ಎಂದರ್ಥ. '**ಯೋಷಿತಮಗ್ನಿಂ ಧ್ಯಾಯೀತ**' ಎಂಬಲ್ಲೂ ಪರಸ್ತ್ರೀಯಸಂಪರ್ಕವು ಅಗ್ನಿಯ ಸಂಪರ್ಕದಿಂದ ಹೇಗೆ ಅನಿಷ್ಟವಾಗುವುದೋ ಹಾಗೆ ಅನಿಷ್ಟಕಾರಿಯಾಗಿದೆ ಎಂದು ತಿಳಿಯಬೇಕು. ಹೀಗೆ ಅರ್ಥಮಾಡಿದರೆ 'ನಾಮ' 'ಯೋಷಿತ್' ಶಬ್ದಗಳ ಮುಖ್ಯಾರ್ಥ ಬಿಟ್ಟ ದೋಷ ಬರುವುದಿಲ್ಲ. 'ಅಸನ್ನೇವ ಸ ಭವತಿ' 'ನ ಚ ರಮಂತ್ಯಹೋ-ಧಿಸದುಪಾಸನಯಾ' ಎಂದು ಶ್ರುತಿಸ್ಮೃತಿಗಳಲ್ಲಿ 'ಅಸತ್ತಾದ'ವಸ್ತುವನ್ನು ಚಿಂತಿಸಬಾರದು ಎಂದು ನಿಷೇಧ ಮಾಡಿದ್ದಾರೆ. ವೇದ ಹಾಗೂ ವೇದದಲ್ಲಿ ವಿಹಿತವಾದ ಉಪಾಸನೆಗೆ ಅವಿರುದ್ಧವಾಗಿಯೇ ಅರ್ಥೈಸಬೇಕು. ಮುಖ್ಯವಾದ ಅರ್ಥಕ್ಕೆ ಬಾಧಕವಿದ್ದರೆ ಅದನ್ನು ಬಿಡುವುದು ಸೂಕ್ತವಾಗಿದೆ. ಹೀಗೆ ವ್ಯವಸ್ಥೆ ಮಾಡದಿದ್ದರೆ 'ಯೋಷಿತಮಗ್ನಿಂ ಧ್ಯಾಯೀತ' ಎಂಬೀ ವಿಧಿವಾಕ್ಯಕ್ಕೆ ವಿಷಯವೇ ಇಲ್ಲ ಎಂದಾದೀತು! 'ಹೆಣ್ಣು ಅಗ್ನಿಯಲ್ಲ' ಎಂದು ಹೆಣ್ಣಿಗಿಂತ ಬೇರೆಯಾದ ವಸ್ತುವನ್ನು ನಿಶ್ಚಯಮಾಡಿಕೊಂಡ ಪುರುಷನಿಗೆ ಹೆಣ್ಣಿನಲ್ಲಿ ಅಗ್ನಿವಿಷಯಕಬುದ್ಧಿ ಬರದೇ ಇರುವುದರಿಂದ, ಈ ಜ್ಞಾನದಿಂದ ಹುಟ್ಟಿದ ಸಂಸ್ಕಾರವೂ ಇಲ್ಲದಿರುವುದರಿಂದ, ಯೋಷಿತ್ ಅಗ್ನಿ ಎಂಬೀ ವಿಷಯಕ ಸ್ಮೃತಿರೂಪವಾದ ಧ್ಯಾನವೇ ಇಲ್ಲ ಎಂದಾಯಿತು. 'ಆಗ ಯೋಷಿತ್ತನ್ನು ಅಗ್ನಿಯೆಂದು ಧ್ಯಾನಿಸಬೇಕು' ಎಂಬೀ ವಿಧಿವಾಕ್ಯ ನಿರ್ವಿಷಯ ಎಂದಾಗಬೇಕಾದೀತು. ಹೀಗಾಗಿ 'ನಾಮ ಬ್ರಹ್ಮ' ಇತ್ಯಾದಿ ವಾಕ್ಯಗಳ ವಿಧಿವಾಕ್ಯಗಳು, ನಿರ್ವಿಷಯಕವಾಗಲಾರವು. ಸವಿಷಯಕವಾಕ್ಯಗಳೇ ಆಗಿವೆ. ಹೀಗಾಗಿ ಮುಖ್ಯಾರ್ಥ ಬಿಡುವುದು ಸೂಕ್ತವೇ ಆಗಿದೆ.

''**ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ ಅಸ್ಯ ಮಹಿಮಾನಮಿತಿ ವೀತಶೋಕಃ**' ಎಂಬೀ ವಾಕ್ಯವಿದೆ. ಇಲ್ಲಿ ಮಹಿಮಾಶಬ್ದಕ್ಕೆ ಅರ್ಥೈಸುವಾಗ ವಿಜಯೀಂದ್ರರು ಕೊಟ್ಟ ಸುಂದರಯುಕ್ತಿ ಹೀಗಿದೆ –

'ಪಿತುಃ ರಾಜ್ಯೇಧಿಭಿಷಿಕ್ತಸ್ಯ ಪುತ್ರಸ್ಯ ಪಿತುಃ ಮಹಿಮಾ ದೃಶ್ಯತೇ'

'ತಂದೆಯ ರಾಜ್ಯದಲ್ಲಿ ಪಟ್ಟಾಭಿಷಿಕ್ತನಾದ ಮಗನಿಗೆ(ನಲ್ಲಿ) ತಂದೆಯ ಮಹಿಮೆಯು ಕಾಣುತ್ತದೆ' ಎಂದು ವ್ಯವಹರಿಸುತ್ತೇವೆ. ಆಗ, ಏನರ್ಥ ತಿಳಿಯುತ್ತದೆ. ರಾಜನ ಧರ್ಮವೇನಿದೆ ಅದಕ್ಕೆ ಸಮಾನವಾದ ಧರ್ಮ ಮಗನಲ್ಲಿದೆ ಎಂದರ್ಥ. ಇದೇ ರೀತಿ ಜುಷ್ಟಂ ಎಂಬ ವಾಕ್ಯದಲ್ಲೂ ಈಶ್ವರನಂತೆ ಮಹಿಮೆಯುಳ್ಳವ ಎಂದರ್ಥ. ಈಶ್ವರನಂತೆ ಸಮಾನ ಧರ್ಮವುಳ್ಳವ ಮುಕ್ತನು. ಅವನು ಬ್ರಹ್ಮನಿಂದ ಬೇರೆಯಾಗಿಯೇ ಇದ್ದು ತನ್ನ ಮಹಿಮೆ ಪಡೆದವ ಎಂದರ್ಥ ತಿಳಿಯುತ್ತದೆ.

★ ಆನಂದ ಎಂದರೇನು? ಎಂಬ ವಿಷಯದ ಚಿಂತನೆ ನಡೆಸುತ್ತಾ ಬಂದ ಮಾತುಗಳು.

ಆನಂದ ಮತ್ತು ದುಃಖದ ಅಭಾವ ಇವೆರಡೂ ಸಮಾನವೇ. ಯಥಾರ್ಥವಾಗಿ ವಿಚಾರಮಾಡಿದಾಗ ಎರಡೂ ಪುರುಷಾರ್ಥವಾಗಿ ಕಂಡಿವೆ ಎನ್ನಲಾಗುವುದಿಲ್ಲ. ಏಕೆಂದರೆ ಒಬ್ಬನಿಗೆ ವೈರಿ ಇರುವ; ಅವನಿಗೆ ಸುಖವಾಯಿತು. ವಸ್ತುತಃ ಶತ್ರುವಿಗೆ ಸುಖವಾದರೆ ಅವನ ವಿರುದ್ಧವಾದವನಿಗೆ ಅದು ಸಹಿಸಲಾಗುವುದಿಲ್ಲ. ಶತ್ರುವಿಗೆ ದುಃಖ-ವಾಗಬೇಕೆಂದು ಸಹಜವಾಗಿ ಲೋಕದಲ್ಲಿ ಕಂಡಿದೆ. ಹೀಗಾಗಿ ವೈರಿಯ ಸುಖವು ಕೂಡ ಪುರುಷಾರ್ಥ ಎಂದಾಗಲೀ. ವಿಜಯೀಂದ್ರರು ನುಡಿದ ಮುತ್ತಿನ ಮಾತು.

''ನ ಹಿ ಲೋಕೇ ಸ್ವವೈರಿಣಃ ಸುಖಮಸ್ತುಥಿ; ದುಃಖಾಭಾವೋಧಿಸ್ತ್ವಿತಿ ಕೋಧಿಪೀಚ್ಛತಿ'

ಲೋಕದಲ್ಲಿ ತನಗೆ ವೈರಿಯಾದವನಿಗೆ ಸುಖವಿರಲಿ; ದುಃಖದ ಅಭಾವವಿರಲಿ ಎಂದು ಯಾವನೂ ಇಚ್ಛಿಸುವುದಿಲ್ಲ.

★ **'ಧಾತುಃ ಪ್ರಸಾದಾನ್ಮಹಿಮಾನಮೀಶಂ'** ಎಂಬ ಶ್ರುತಿವಾಕ್ಯದಲ್ಲಿರುವ 'ಮಹಿಮ'ಶಬ್ದದ ಔಚಿತ್ಯವನ್ನು ವಿಜಯೀಂದ್ರರು ಬಹಳ ವಿಸ್ತಾರವಾಗಿ ತಿಳಿಸಿದ್ದಾರೆ.

'ಮಹಿಮ' ಎಂದರೆ ಈಶ್ವರನ ಸಾರ್ವಜ್ಞಾದಿ ಸ್ವರೂಪವೇ ಆಗಿದೆ ಎಂಬುದನ್ನು ಪ್ರತಿಪಾದಿಸಲಾಗಿದೆ. 'ಮಹಿಮ' ಶಬ್ದದ ಅರ್ಥ ಸ್ವರೂಪಮಾತ್ರವಲ್ಲ ಎಂಬ ವಾದ ಅಯುಕ್ತವಾದುದು. ಈಶ್ವರನ ಸ್ವರೂಪವಲ್ಲ ಎಂದರ್ಥೈಸಿದರೆ ಆಗ ಅಪಕೃಷ್ಟ(ನೀಚ)ವಾದ ವಸ್ತುವಿಗೂ ಕೂಡ ಸ್ವರೂಪಸತ್ವ ಎಂಬುದು ಇರುವುದರಿಂದ; ಅದನ್ನಿಟ್ಟುಕೊಂಡು 'ಅಪಕೃಷ್ಟವಸ್ತುವಿನ ಮಹಿಮೆ = ಸ್ವರೂಪವಿದೆ' ಎಂದು ಈಶ್ವರನಿಗೆ ಹೇಳುವ ಪ್ರಸಂಗ ಬಂದೀತು. ಆದರೆ ಇದು ಅಯುಕ್ತವೆಂದು ಸ್ಪಷ್ಟವಾಗಿದೆ. ಹಾಗಾದರೆ ಮಹಿಮ ಎಂದರೇನರ್ಥ? ಮಹಿಮಾ = ವಸ್ತುವಿನಲ್ಲಿರುವ ಉತ್ಕರ್ಷಧರ್ಮ ಅರ್ಥಾತ್ ಮಹಿಮೆ ಆಗಿದೆ. ಹೀಗಾಗಿ ಮಹಿಮಶಬ್ದದ ಅರ್ಥ ಈಶ್ವರನ ಸಾರ್ವಜ್ಞಾದಿ ಸ್ವರೂಪವೇ ಆಗಿದೆ ಎಂದರ್ಥೈಸಬೇಕು.

★ **''ತಮೇವ ಭಾಂತಮನುಭಾತಿ ಸರ್ವಂ'** ಶ್ರುತ್ಯರ್ಥ ಚಿಂತನೆ ನಡೆಸುವಾಗ ಕೊಟ್ಟ ಸುಂದರ ಯುಕ್ತಿ.

'ತಮೇವ' ಎಂಬೀ ಶ್ರುತಿ ಸೂರ್ಯಾದಿ ಇತರ ಪ್ರಕಾಶವು ಈಶ್ವರನ ಪ್ರಕಾಶದ ಅಧೀನವಿದೆ ಎಂಬರ್ಥ ತಿಳಿಸುತ್ತದೆ ಹೊರತು ಈಶ್ವರನ ಪ್ರಕಾಶವೇ ಸೂರ್ಯಾದಿಗಳ ಪ್ರಕಾಶ ಎಂಬರ್ಥ ತಿಳಿಸುತ್ತಿಲ್ಲ.

'ಅನುಭಾತಿ' ಎಂಬುದಕ್ಕೆ 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂಬುದಕ್ಕೂ ಹೀಗೆಯೇ ಅರ್ಥ. ಮತ್ತೊಬ್ಬರ ಪ್ರಕಾಶ ಈಶ್ವರನ ಅಧೀನವಿದೆ ಎಂದೇ. ಹೀಗೆ ಅರ್ಥೈಸದಿದ್ದರೆ 'ಅನು' 'ತಸ್ಯ ಭಾಸಾ' ಎಂಬೀ ಶಬ್ದಗಳು ಅನುಪಪನ್ನವಾಗುತ್ತವೆ. 'ಅವನ ಪ್ರಕಾಶ' ಎಂದು ತೃತೀಯಾವಿಭಕ್ತಿ ಅಯುಕ್ತ ಎಂದಾದೀತು.

'ರಾಜಪುತ್ರ್ಯಪಿ ಭರ್ತಾರಂ ಗಚ್ಛಂತಮನುಗಚ್ಛತಿ ಇತ್ಯಾದಿಶಬ್ದಾತ್ ಭಾರ್ಯಾಗಮನಸ್ಯ ತತ್ರ ಗಮನಾಧೀನ-ಪ್ರತೀತೇರಾನುಭವಿಕತ್ವಾತ್'' 'ರಾಜನ ಮಗಳು ಕೂಡ ಹೋಗುತ್ತಿರುವ ತನ್ನ ಗಂಡನನ್ನು ಅನುಸರಿಸುತ್ತಾಳೆ' ಎಂದಾಗ ಮಗಳ ಹೋಗುವಿಕೆ ಎಂಬುದು ಗಂಡನ ಅಧೀನವಾಗಿದೆ ಎಂದರ್ಥ ಹೇಗೆ ತಿಳಿಯವುದೋ ಹಾಗೆ 'ತಸ್ಯ ಭಾಸಾ' ಎಂಬಲ್ಲೂ ಈಶ್ವರಾಧೀನಪ್ರಕಾಶ ಎಂದರ್ಥೈಸಬೇಕು.

ಜೀವನು ಅಣು ಎಂಬ ವಿಷಯದಲ್ಲಿ ದೀರ್ಘವಾದ ಪ್ರಬಂಧವನ್ನು ಮಂಡಿಸಿದ ವಿಜಯೀಂದ್ರರು ಕೊನೆಯಲ್ಲಿ ನುಡಿದ ಮಾತು. **''ಏತಚ್ಚ ಪ್ರಪಂಚಿತಮಸ್ಮಾಭಿಃ ಶಿಕ್ಷಾಯಾಮ್''** ಈ ವಿಚಾರಧಾರೆಯನ್ನು ನಾವು ನಮ್ಮ ಅದ್ವೈತಶಿಕ್ಷಾ ಎಂಬ ಗ್ರಂಥದಲ್ಲಿ ವಿಸ್ತಾರ ಮಾಡಿದ್ದೇವೆ.

ಈ ಅಂಶ ಗಮನಿಸಿದಾಗ ವಿಜಯೀಂದ್ರರು ಶ್ರುತ್ಯರ್ಥಸಾರಕ್ಕಿಂತ ಮೊದಲೇ ಅದ್ವೈತಶಿಕ್ಷಾ ಗ್ರಂಥವನ್ನು ರಚಿಸಿದ್ದರೆಂಬುದು ತಿಳಿಯುತ್ತದೆ.

★ 'ಸೋಧಿಂತರಾತ್' ಎಂಬೀ ಅಥರ್ವಶಿರವಾಕ್ಯದ ವಿಮರ್ಶೆ ಮಾಡಿದಾಗ ತತ್ ಶಬ್ದದಿಂದ ಹಿಂದೆ ಹೇಳಿದ ಅಂತರ್ಯಾಮಿಯ ವಿಮರ್ಶೆ ಮಾಡುವುದು ಯುಕ್ತವಲ್ಲ, ರುದ್ರನೇ 'ರುದ್ರ' ಮತ್ತು 'ಅಹಂ' ಶಬ್ದಗಳಿಂದ ಉಪಸ್ಥಿತನಾಗಿರುವನು. ಹೀಗಾಗಿ ರುದ್ರನನ್ನೇ ಇಲ್ಲಿ ತತ್ ಶಬ್ದದಿಂದ ಪರಾಮರ್ಶಿಸಿದಾಗ ಜಗತ್ಸೃಷ್ಟ್ಯಾದಿಗಳೆಲ್ಲ ರುದ್ರನಿಗೆ ಇದೆ ಎಂದು ತಿಳಿಯುತ್ತದೆ ಎಂದು ಪರರು ಹೇಳುತ್ತಾರೆ. ಇದೂ ಸರಿಯಲ್ಲ, ಏಕೆ? ಈ ವಾಕ್ಯಕ್ಕೆ ಅಂತರ್ಯಾಮಿಪರವಾಗಿಯೇ ಅರ್ಥೈಸುವುದು ಉಚಿತವಾಗಿದೆ. ಅದು ಹೀಗೆ 'ತೇ ರುದ್ರಮಪೃಚ್ಛನ್' ಎಂದು ಪ್ರಶ್ನೋತ್ತರ ಕಂಡಿದೆ. ಇದಕ್ಕನುಗುಣವಾಗಿ ಕೋ ಭವಾನ್? ಯಾರು ನೀನು? ಎಂದು ಇದು ಪ್ರಶ್ನವಾಕ್ಯ. ಈ ವಾಕ್ಯಕ್ಕೆ ಹೀಗೆ ಅರ್ಥ ತಿಳಿಯುವುದು. ಭವಾನ್ ಕಿಮ್? = ನೀನು ಮೊದಲಿದ್ದೆ ಏನು? ಆಗ ಇರುವೆ, ಮುಂದೆ ಇರುವೆ ಎಂದು ಅಭಿಪ್ರಾಯ ತಿಳಿಯುತ್ತದೆ. ಅರ್ಥಾತ್ ದೇವತೆಗಳು ಸ್ವರ್ಗಲೋಕಕ್ಕೆ ತೆರಳಿದಾಗ ಆ ವರ್ತಮಾನಕಾಲದಲ್ಲಿ ರುದ್ರನನ್ನು ಸಾಕ್ಷಾತ್ಕಾರ ಮಾಡಿಕೊಂಡು, ಅವನ ವಿಷಯದಲ್ಲಿ ಪ್ರಶ್ನೆ ಮಾಡಿದರು ಎಂಬರ್ಥ ಯುಕ್ತವಾಗುತ್ತದೆ.

ಈ ಪ್ರಶ್ನೆ ಕೂಡಿಸಬೇಕಾದರೆ ರುದ್ರನ ಅಂತರ್ಯಾಮಿಯ ವಿಷಯವಾಗಿ ಯಾರು ನೀನು? ಎಂಬ ಪ್ರಶ್ನೆ ಹೊರಟಿದ್ದು ಅಂದರೆ ನಿನ್ನ (ರುದ್ರನ) ಒಳಗಿರುವವ ಯಾರು? ಒಳಗಿರುವವ ನಾರಾಯಣ; ಅವನನ್ನು ಹಿಂದಿನ ತತ್ ಶಬ್ದದಿಂದ ಪರಾಮರ್ಶಿಸಿದೆ. ಹೀಗಾಗಿ ಅವನಿಗೇ ಜಗತ್ಕಾರಣತ್ವಾದಿಗಳನ್ನು ಹೇಳುವುದು ಅತ್ಯಂತ ಯುಕ್ತ. ಎದುರಿಗಿರುವ ರುದ್ರನನ್ನು ಕಂಡ ದೇವತೆಗಳಿಗೆ 'ನೀನ್ಯಾರೆಂದು' ರುದ್ರವಿಷಯಕ ಪ್ರಶ್ನೆ ಅನುಚಿತ.

ಈ ಶ್ರುತಿಯಲ್ಲಿ ಬರುವ ಪ್ರಥಮಪುರುಷಪ್ರಯೋಗ ಹೇಗೆ ಯುಕ್ತವು? ಎಂಬುದನ್ನು ವಾಲ್ಮೀಕಿಯ ಮಾತು, ವ್ಯಾಕರಣಮಹಾಭಾಷ್ಯಗಳ ಆಧಾರದಿಂದ ವಿಜಯೀಂದ್ರರು ಸುಂದರವಾಗಿ ಸಮರ್ಥಿಸಿದ್ದಾರೆ. ನಂತರ ನುಡಿದದ್ದು ''ಏತಚ್ಚ ಅಸ್ಮಾಭಿಃ ಪರತತ್ತ್ವಪ್ರಕಾಶಿಕಾಯಾಂ ಪ್ರಪಂಚಿತಮಿತಿ ಗ್ರಂಥಗೌರವಭಯಾತ್ ನೇಹ ಪ್ರಪಂಚ್ಯತೇ'. ಈ ವಿಷಯದಲ್ಲಿ ಪರತತ್ತ್ವಪ್ರಕಾಶಿಕಾ ಗ್ರಂಥದಲ್ಲಿ ವಿಸ್ತಾರಮಾಡಿದ್ದೇವೆ. ಗ್ರಂಥ ಹೆಚ್ಚಾದೀತೆಂದು ಇಲ್ಲಿ ವಿಸ್ತಾರ ಮಾಡುವುದಿಲ್ಲ.

★ 'ಅಸ್ಥೂಲಮನಣುಃ' ಎಂಬೀ ಶ್ರುತಿವಾಕ್ಯ ನಿಷೇಧ ತಿಳಿಸುತ್ತಿದೆ. ನ ವಿದ್ಯತೇ ಸ್ಥೂಲಂ ಯಸ್ಮಾತ್ ಅಸ್ಥೂಲಂ ಎಂದು ಹೀಗೆ ಅನ್ಯಪದಾರ್ಥಬಹುವ್ರೀಹಿ ಸಮಾಸ ಮಾಡುವುದಿದೆ. ಇದರಿಂದ ಪರಮಾತ್ಮನಿಗಿಂತ ಬೇರೆಯದಾದ ಸ್ಥೂಲಪದಾರ್ಥದ ನಿಷೇಧ ಎಂದರ್ಥ ತಿಳಿಯುತ್ತದೆ. ಕೊನೆಗೆ ಪರ್ಯವಸಾನವಾಗುವುದು ಪರಮಾತ್ಮನ ನಿಷೇಧದಲ್ಲಿ ಎಂದು ಪರರ ವಾದ. ಇದು ತಪ್ಪು.

ವಿಜಯೀಂದ್ರರು ಕೊಟ್ಟ ಸುಂದರವಾದ ಯುಕ್ತಿ. 'ಅಯಂ ಅನಾಥಃ' 'ಇವನು ಅನಾಥನು' ಎನ್ನುತ್ತೇವೆ. ಇದರಂತೆ ನ ವಿದ್ಯತೇ ಸ್ಥೂಲಂ ಯಸ್ಯ ಸಃ ಅಸ್ಥೂಲಃ ಎಂದು ಹೀಗೆಯೇ ಬಹುವ್ರೀಹಿ ಸಮಾಸ ಮಾಡಬೇಕು. 'ಅಣೋರಣೀಯಾನ್' ಎಂಬ ಮತ್ತೊಂದು ಶ್ರುತಿ ಬ್ರಹ್ಮನಿಗೆ ಅಣುತ್ವ ಮಹತ್ವ ಧರ್ಮಗಳನ್ನು ಅರ್ಥಾತ್ ಅಸ್ಥೂಲತ್ವ ಧರ್ಮವನ್ನು ತಿಳಿಸುತ್ತಾ ಇರುವುದರಿಂದ 'ಪರಮಾತ್ಮನ ನಿಷೇಧದಲ್ಲಿ ಪರ್ಯವಸಾನ' ಎಂಬ ಮಾತೇ ಇಲ್ಲ.

ಕೇಚಿತ್ತು ಎಂದು 'ಕೆಲವರ ಅಭಿಪ್ರಾಯವನ್ನು' ಅಲ್ಲಲ್ಲಿ ವಿಜಯೀಂದ್ರರು ಉಲ್ಲೇಖಿಸಿರುವುದೂ ಗಮನಾರ್ಹಾಂಶವು ಆಗಿದೆ.

ಹೀಗೆ ವಿಜಯೀಂದ್ರರು ಸುಂದರ ಯುಕ್ತಿಗಳಿಂದ ತರ್ಕದ ಪರಿಷ್ಕಾರಗಳಿಂದ ಎರಡನೇ ಪರಿಚ್ಛೇದವನ್ನು ಸಮಾಪ್ತಿಗೊಳಿಸಿದ್ದಾರೆ.

## ಮೂರನೆ ಪರಿಚ್ಛೇದದ ಸಾರ

ಮೂರನೆಯ ಪರಿಚ್ಛೇದದಲ್ಲಿ ವಿಶೇಷವಾಗಿ ದ್ವೈತಮತದ ಮುಖ್ಯಪ್ರಮೇಯವಾದ ಭೇದದ ವಿಚಾರ ನಡೆಸಲಾಗಿದೆ. ಅದ್ವೈತಿಗಳು ದ್ವೈತವನ್ನು ಹೇಗೆ ತಾನೆ ಖಂಡಿಸಲು ಸಾಧ್ಯಛ? ಸುತರಾಂ ಸಾಧ್ಯವಿಲ್ಲಛ ಎನ್ನಲಾಗಿದೆ. ಶ್ಲೋಕರೂಪದಲ್ಲಿ ಅದ್ವೈತ-ದ್ವೈತಗಳ ಖಂಡನೆ-ಮಂಡನೆ ಬಲುಸೊಗಸಾಗಿ ಮೂಡಿ ಬಂದಿದೆ.

ಭೇದವೆಂದರೇನು? ಹೀಗೋ ಹಾಗೋ ಎಂಬ ವಿಕಲ್ಪವೇ ಹೊರಡುವುದಿಲ್ಲ ಶ್ರುತ್ಯಾದಿಗಳಿಂದ ಭೇದ ಸ್ಪಷ್ಟವಿದೆ. ಅದನ್ನು ಅಪಲಾಪ ಮಾಡಲು ಸಾಧ್ಯವೇ ಇಲ್ಲ 'ಶುಷ್ಕತರ್ಕೈಃ ಭೇದಬಾಧೇ ಸ್ಯಾದಭೇದೋಽಪಿ ಬಾಧಿತಃ' 'ಒಣತರ್ಕಗಳಿಂದ ನೀವು ಭೇದವು ಇಲ್ಲ, ಅದು ಬಾಧಿತ ಎನ್ನುವುದಾದರೆ, ನಾವೂ ಕೂಡ ಅದೇ ಒಣತರ್ಕಗಳಿಂದ ಅಭೇದವಿಲ್ಲ; ಅದು ಬಾಧಿತ ಎನ್ನುತ್ತೇವೆ. ಇಲ್ಲಿ ವಿಜಯೀಂದ್ರರು ಬಳಸಿದ ಶಬ್ದ 'ಶುಷ್ಕತರ್ಕೈಃ' ಎಂದು. ಬಲು ಸೊಗಸಾದ ವಾದ ಪ್ರಕ್ರಿಯೆಯಿಂದ ಇಲ್ಲಿ ಭೇದವನ್ನು ಸಾಧಿಸಲಾಗಿದೆ. ಇನ್ನೂ ಸೊಗಸಾದ ಮಾತು ಹೀಗಿದೆ.

''ಭೇದಸ್ವರೂಪಂ ಧರ್ಮೋ ವಾ ಇತ್ಯಾದಿ ರೂಪಾ ವಿಭೀಷಿಕಾ ...' ಭೇದವು ಸ್ವರೂಪವೋ ಅಥವಾ ಧರ್ಮವೋ ಎಂದು ವಿಕಲ್ಪಿಸಿ, ನೀವು ನಮ್ಮನ್ನು ಹೆದರಿಸುವುದಾದರೆ ನಾವೂ ಕೂಡ, ಅಭೇದವನ್ನು ಇದೇ ರೀತಿ ಪ್ರಶ್ನಿಸಿ ಹೆದರಿಸುತ್ತೇವೆ. ಕೇವಲ ಆಕಾರವನ್ನು ಸೇರಿಸಿ ಪ್ರಶ್ನಿಸುವುದರಲ್ಲಿ ಏನೂ ಔಚಿತ್ಯವಿರುವುದಿಲ್ಲ

ಭೇದವನ್ನು ನೀವೇನಾದರೂ ಖಂಡಿಸಿ, ಅದರಿಂದ ಅಭೇದ ಸಿದ್ಧಿಸುತ್ತದೆ ಎನ್ನುವುದಾದರೆ ನಾವೂ ಹೇಳುತ್ತೇವೆ 'ಅಭೇದವನ್ನು ಖಂಡಿಸಿ ಭೇದವನ್ನು ಸಾಧಿಸುತ್ತೇವೆ' ಎಂದು. ಹೀಗೆ ನಾನಾ ಮಜಲಿನಲ್ಲಿ ಭೇದಾಭೇದದ ಚರ್ಚೆ ಇಲ್ಲಿ ವಿಜಯೀಂದ್ರರಿಂದ ಮೂಡಿ ಬಂದಿದೆ.

'ಬೆಂಕಿಯು ಬಿಸಿ' ಎಂಬುದು ಪ್ರತ್ಯಕ್ಷದಿಂದ ಹೇಗೆ ತಿಳಿದಿದೆಯೋ, ಹಾಗೆಯೇ ಜೀವೇಶರ ಭೇದವೂ ಕೂಡ ನಿಶ್ಚಿತವಾಗಿದೆ. ನಮ್ಮ ಅನುಭವಕ್ಕೇ ಬಂದಿದೆ. ಅದನ್ನು ಅಪಲಾಪಿಸುವುದು ಸರಿಯಲ್ಲ. ಇನ್ನೂ ವಿಶೇಷವಾಗಿ ಭೇದದ ಖಂಡನೆಯ ವಿಷಯದಲ್ಲಿ ಪ್ರಮಾಣಗಳನ್ನುದ್ಧರಿಸಿ, ಭೇದದ ಖಂಡನೆಯನ್ನು ತಿರಸ್ಕರಿಸಲಾಗಿದೆ.

ಶಬ್ದದ ಸ್ವಭಾವಕ್ಕನುಗುಣವಾಗಿ ಪ್ರಯೋಗ ಕಂಡಿದೆ ಎಂಬೀ ವಿಷಯದಲ್ಲಿ ವಿಜಯೀಂದ್ರರು ಕೊಟ್ಟ ದೃಷ್ಟಾಂತ ಹೀಗಿದೆ. 'ಹೋಗುವಿಕೆ ಎಂಬ ಕ್ರಿಯೆ ಒಂದೇ. ಅದನ್ನು ಹೇಳುವಾಗ 'ಗಚ್ಛತಿ' 'ಚಲತಿ' ಎಂಬ ಎರಡುಶಬ್ದಗಳಿಂದ ಕರೆಯುತ್ತಾರೆ.

ಪ್ರಯತ್ನ ಎಂಬುದು ಒಂದೇ. ಅದನ್ನು ಹೇಳುವಾಗ 'ಕರೋತಿ' 'ಪ್ರಯತತೇ' ಎಂಬ ಶಬ್ದಗಳನ್ನು ಬಳಸಲಾಗುತ್ತದೆ. ಕರ್ಮದ ಸಾಪೇಕ್ಷ ಮತ್ತು ನಿರಪೇಕ್ಷವಾಗಿ ಇಲ್ಲೆಲ್ಲ ವ್ಯವಹಾರ ಕಂಡಿದೆ. ಅದು ಶಬ್ದದ ಸ್ವಭಾವ ಪ್ರಯುಕ್ತವಾಗಿ ಲೋಕದಲ್ಲಿ ಕಂಡಿದೆ. ಭೇದಾಭೇದಗಳು ಸಾಪೇಕ್ಷ - ನಿರಪೇಕ್ಷ ಎಂಬೀ ವಿಚಾರ ಬಂದಾಗ ಈ ದೃಷ್ಟಾಂತ ಕೊಟ್ಟು ಸಮರ್ಥಿಸಲಾಗಿದೆ.

ಆಚಾರ್ಯ ಮಧ್ವರು ಅನುವ್ಯಾಖ್ಯಾನ ವೈಶೇಷಿಕಾಧಿಕರಣದಲ್ಲಿ ಹೇಳಿದ ಭೇದದ ಸ್ವರೂಪವನ್ನು ವಿಜಯೀಂದ್ರರು ಇಲ್ಲಿ ವಿಸ್ತಾರ ಮಾಡಿದ್ದಾರೆ.

ತೃತೀಯಪರಿಚ್ಛೇದದ ಕೊನೆಗೆ 'ಅಥ ಕಸ್ಮಾತ್' 'ಸರ್ವಧರ್ಮೋಪಪತ್ತೇಶ್ಚ' ಇತ್ಯಾದಿ ಶ್ರುತಿ ಸೂತ್ರಗಳಿಂದ ಸರ್ವಜ್ಞ- ಸರ್ವಶಕ್ತ- ಅನಂತಕಲ್ಯಾಣಗುಣಗಳಿಂದ ಪೂರ್ಣನಾದವ ಹರಿ. ಅವನಿಗಿಂತ ಭಿನ್ನವಾದುದು ಈ ಪ್ರಪಂಚ. ಈ ಪ್ರಪಂಚಕ್ಕೂ ಹರಿಗೂ ಅತ್ಯಂತ ಭೇದವಿದೆ ಎಂಬುವುದನ್ನು ಉಪಸಂಹಾರ ಮಾಡಿದ್ದಾರೆ.

ಇಲ್ಲಿ ಹೆಚ್ಚಾಗಿ ವ್ಯಾಸರಾಜರ ನ್ಯಾಯಾಮೃತದ 2ನೇ ಪರಿಚ್ಛೇದ 14ನೇ ಭಂಗ ಸಾಮಾನ್ಯತೋ ಭೇದ ಖಂಡನೋದ್ಧಾರ ಹಾಗೂ 15ನೆಯ ಭಂಗ ವಿಶಿಷ್ಟಭೇದಖಂಡನೋದ್ಧಾರ; ಈ ಭಾಗದ ವಾಕ್ಯಗಳೆಲ್ಲ ಅಲ್ಲಲ್ಲಿ ಆವೃತ್ತಿಯಾಗಿವೆ.

## ನಾಲ್ಕನೆಯ ಪರಿಚ್ಛೇದದ ಸಾರ

ನಾಲ್ಕನೆಯ ಪರಿಚ್ಛೇದದಲ್ಲಿ ಮೋಕ್ಷದ ಸ್ವರೂಪ ಅದ್ವೈತಿಗಳಿಗೊಪ್ಪಿಗೆಯಾದ ಮೋಕ್ಷದ ಖಂಡನೆ ಇತ್ಯಾದಿಗಳು ವಿಚಾರಿಸಲ್ಪಟ್ಟಿವೆ.

''ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ'' ಇತ್ಯಾದಿ ಶ್ರುತಿಗಳು ಮೋಕ್ಷದ ವಿಷಯದಲ್ಲಿ ಪ್ರಮಾಣವಾಗಿವೆ. ಜೀವನಿಗಿರುವ ಸಂಸಾರಬಂಧ ಸತ್ಯವಾದುದು. ಅದು ಪರಮಾತ್ಮನ ಪ್ರಸಾದದಿಂದ ನಿವೃತ್ತವಾಗುತ್ತದೆ. 'ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋಃ ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್' 'ತತ್ ಪ್ರೀಣನಾತ್ ಮೋಕ್ಷಮಾಪ್ನೋತಿ ಸರ್ವ' ಇತ್ಯಾದಿ ಶ್ರುತಿಗಳು ಈ ವಿಷಯದಲ್ಲಿ ಪ್ರಮಾಣಗಳಾಗಿವೆ.

ವಸ್ತುತಃ ಇಲ್ಲಿ ವಿಚಾರಮಾಡಿದಾಗ ಭಗವತ್ಪ್ರಸಾದವು ಜ್ಞಾನದ ಮೂಲಕ ಎಂದು ತಿಳಿಯುವುದಿಲ್ಲ. ಆದರೆ 'ತಮೇವಂ ವಿದ್ವಾನಮೃತ ಇಹ ಭವತಿ' ಇತ್ಯಾದಿ ಶ್ರುತಿಗಳು ಬ್ರಹ್ಮನ ಜ್ಞಾನವೇ ಮೋಕ್ಷಕ್ಕೆ ಸಾಧನ ಎನ್ನುತ್ತಿವೆ. ಆದರೂ ಬೇರೆ ಶ್ರುತಿಗಳಲ್ಲಿ ಬ್ರಹ್ಮನ ಜ್ಞಾನವೇ ಭಗವಂತನ ಪ್ರಸಾದಕ್ಕೆ ಕಾರಣವಾಗಿದೆ ಎಂದು ತಿಳಿಯುತ್ತದೆ.

ಹೀಗಾಗಿ ನಾವಿಲ್ಲಿ ಅರ್ಥೈಸುವಾಗ, ಪ್ರಸಾದ ಎಂಬುದು 'ದ್ವಾರ' = ತನ್ಮೂಲಕ ಎಂದು ಹೇಳಬೇಕು. ಆಗ ಎರಡೂ ಶ್ರುತಿಗಳಿಗೆ ಅವಿರೋಧವಾಗಿ ಅರ್ಥ ಯುಕ್ತವಾಗುತ್ತದೆ. 'ಯಮೇವೈಷ ವೃಣುತೇ' ಎಂಬೀ ಶ್ರುತಿಯೂ ಕೂಡ ಭಗವತ್ಪ್ರಾಪ್ತಿಗೆ ಭಗವಂತನ ಪ್ರಸಾದ ಅವಶ್ಯವಾಗಿ ಬೇಕು ಎನ್ನುತ್ತಿದೆ.

ಇನ್ನು ಕೆಲವು ಶ್ರುತಿಗಳು ಸ್ಮೃತಿಗಳು ಕರ್ಮದಿಂದಲೇ ಮೋಕ್ಷವಾಗುತ್ತದೆ ಎಂಬರ್ಥ ಹೇಳುವಂತೆ ತೋರುತ್ತದೆ. 'ಸಿತಾಸಿತಾ ಸರಿತೌ ಯತ್ರ ಸಂಗತೇ ತತ್ರಾಪ್ಲುತಾ ಸೋದಿದಿವಮುತ್ಪತಂತಿ' 'ಅಪಾಮ ಸೋಮಮಮೃತಾ ಅಭೂಮ' 'ಅಕ್ಷಯ್ಯಾ ಹ ವೈ ಚಾತುರ್ಮಾಸ್ಯಯಾಜಿನೋ' 'ಕರ್ಮಣೈವ ಹಿ ಸಂಸಿದ್ಧಿಂ ಆಸ್ಥಿತಾ ಜನಕಾದಯಃ' ಇತ್ಯಾದಿ. ಆದರೆ 'ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ' 'ನ ಕರ್ಮಣಾ ನ ಪ್ರಜಯಾ ಧನೇನ' 'ನಾಸ್ತ್ಯಕೃತಃ ಕೃತೇನ' ಇತ್ಯಾದಿ ಶ್ರುತಿಗಳು ಸ್ಪಷ್ಟವಾಗಿ ಕರ್ಮಗಳು ಮೋಕ್ಷಕ್ಕೆ ಸಾಧನವಾಗಲಾರವು ಎಂದು ನಿಷೇಧಿಸಿವೆ. ಕರ್ಮ ಆಚರಣೆ ಮಾಡಿ, ಅದರಿಂದ ಶುದ್ಧವಾದ ಅಂತಃಕರಣದಿಂದ ಜ್ಞಾನಸಂಪಾದಿಸಿಯೇ ಮೋಕ್ಷವಾಗುತ್ತದೆ ಎನ್ನುತ್ತಿವೆ. ಅಷ್ಟೇ ಅಲ್ಲ 'ತದ್ಯಥೇಹ ಕರ್ಮಚಿತೋ ಲೋಕಃ ಕ್ಷೀಯತೇ' ಎಂಬೀ ಶ್ರುತಿ ಕರ್ಮದಿಂದ ಸಂಪಾದಿಸಲ್ಪಟ್ಟ ಪುರುಷಾರ್ಥನಾಶವಾದ ಫಲವುಳ್ಳದ್ದು ಎನ್ನುತ್ತಿದೆ.

'ಜ್ಞಾನಮುತ್ಪದ್ಯತೇ ಪುಂಸಾಂ ಕ್ಷಯಾತ್ ಪಾಪಸ್ಯ ಕರ್ಮಣಃ' ಎಂಬೀ ಸ್ಮೃತಿ ಸ್ಪಷ್ಟವಾಗಿ ಕರ್ಮಗಳಿಂದ ಅಂತಃಕರಣಶುದ್ಧಿ ಆಗುತ್ತದೆ ಎನ್ನುತ್ತಿವೆ. ಹೀಗಾಗಿ ಶ್ರುತಿಸ್ಮೃತಿಗಳ ಪೂರ್ವಾಪರ ಅರ್ಥವಿಚಾರ ಮಾಡಿದಾಗ,

'ಜ್ಞಾನದಿಂದಲೇ ಮೋಕ್ಷವಾಗುತ್ತದೆ. ಕರ್ಮಗಳಾಚರಣೆಯಿಂದ ಅಂತಃಕರಣವು ಶುದ್ಧವಾಗಿ ತನ್ಮೂಲಕ ಜ್ಞಾನ ಸಂಪಾದಿಸಿ, ತನ್ಮೂಲಕ ಅದು ಮೋಕ್ಷಕ್ಕೆ ಉಪಯೋಗಿ ಆಗುತ್ತದೆ' ಎಂಬೀ ವಿಚಾರ ಸ್ಪಷ್ಟವಾಗುತ್ತದೆ.

★ ನಂತರ ಈಶಾವಾಸ್ಯೋಪನಿಷತ್ತಿನ ''ವಿದ್ಯಾಂ ಚಾವಿದ್ಯಾಂ ಚ ಯಸ್ತದ್ ವೇದೋಭಯಂ ಸಹ'' ಎಂಬೀ ವಾಕ್ಯಾರ್ಥವಿಚಾರ ನಡೆಸಲಾಗಿದೆ. ಶ್ರುತಿಗೆ 2 ವಿಧದಲ್ಲಿ ಅರ್ಥಮಾಡಲಾಗಿದೆ. ಅವಿದ್ಯೆಯಿಂದ, ಮೃತ್ಯುಂ = ಪಾಪವನ್ನು ತೀರ್ತ್ವಾ = ದಾಟಿ, ಅನಂತರ, ವಿದ್ಯೆಯಿಂದ ಅಮೃತಮಶ್ನುತೇ = ಮೋಕ್ಷವನ್ನು ಹೊಂದುವನು.

ಅವಿದ್ಯೆ ಎಂದರೆ, ಕರ್ಮ ಎಂದರ್ಥ. ಮೃತ್ಯು ಎಂದರೆ ಪಾಪ ಎಂದರ್ಥ. ಇವೆರಡನ್ನು ಕಳಚಿದವ ಮೋಕ್ಷ ಪಡೆಯುವನು ಎಂದು ಶ್ರುತಿಯ ಪೂರ್ವಾಪರವಾಕ್ಯಗಳಿಗೆ ಅವಿರೋಧವಾಗಿ ಅರ್ಥೈಸಲಾಗಿದೆ. ಜ್ಞಾನಕರ್ಮ-ಸಮುಚ್ಚಯವೆಂಬ ಪಕ್ಷವನ್ನೂ ಇಲ್ಲಿ ಖಂಡಿಸಲಾಗಿದೆ.

★ ಅನಂತರ ಬ್ರಹ್ಮನು ಆನಂದಸ್ವರೂಪವುಳ್ಳವನು. ಆನಂದವು ಬ್ರಹ್ಮನಿಂದ ಅಭಿನ್ನವಿದೆ ಎಂಬುದರ ವಿಚಾರ ಮಾಡಲಾಗಿದೆ. ಅದ್ವೈತಿಗಳು ಮೋಕ್ಷಸ್ವರೂಪ ಸಮರ್ಥಿಸಲು 'ತಸ್ಯಾಭಿಧ್ಯಾನಾತ್ ಯೋಜನಾತ್ ತತ್ತ್ವಭಾವಾತ್ ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ' ಎಂಬೀ ಶ್ರುತಿಯನ್ನು ಆಧಾರವಾಗಿಟ್ಟುಕೊಂಡಿದ್ದಾರೆ. 'ಮಾಯಾ' ಶಬ್ದವಿದೆ. ಅದು ಅವಿದ್ಯೆಯನ್ನು ಹೇಳುತ್ತಿದೆ. ಅವಿದ್ಯೆಯ ನಿವೃತ್ತಿಯೇ ಮೋಕ್ಷ ಎಂದು. ಆದರಿದೂ ಸರಿಯಲ್ಲ, ಅವಿದ್ಯೆಯ ನಿವೃತ್ತಿಯೂ ಕೂಡ ಸುಖದುಃಖಾಭಾವೇತರವಾಗಿದೆ. ಸ್ವತಃ ಪುರುಷಾರ್ಥ ಅಲ್ಲಫ಼ಿ ಎಂದಾಗಬೇಕಾದೀತು. ಇತ್ಯಾದಿಯಾಗಿ ವಿಭಿನ್ನ ರೀತಿಯಲ್ಲಿ ಅದ್ವೈತಿಗಳಿಗೆ ಅಭಿಮತವಾದ ಮೋಕ್ಷವನ್ನು ನಿರಾಕರಿಸಲಾಗಿದೆ.

★ 'ತರತಿ ಶೋಕಮಾತ್ಮವಿತ್'' ಎಂಬೀ ಶ್ರುತಿಯು ಆತ್ಯಂತಿಕದುಃಖದ ನಾಶವನ್ನೇ ಮೋಕ್ಷ ಎನ್ನುತ್ತಿದೆ ಎಂಬ ಮತ್ತೊಂದು ವಾದವೂ ಸರಿಯಲ್ಲ, ಏಕೆ? ಆತ್ಯಂತಿಕದುಃಖದ ನಾಶವೆಂಬುದು ಆಯವ್ಯಯ ಸಮಾನವಾದುದಾಗಿದೆ. ಅದು ಪುರುಷಾರ್ಥವೆನಿಸಲಾರದು ಇತ್ಯಾದಿಯಾದ ವಿಚಾರಮಂಡನೆ ಅಲ್ಲಲ್ಲಿ ಮೂಡಿ ಬಂದಿದೆ. ಅದ್ವೈತಿಗಳ ವಾದ ಹೀಗೆ ''ಜ್ಞಾನಿಯಾದವ ಜೀವನ್ಮುಕ್ತಫ಼ಿ; ಸಂಸಾರದ ಅವಸ್ಥೆಗಿಂತ ವಿಲಕ್ಷಣವಾದ ಅವಸ್ಥೆಯುಳ್ಳವ. ಈ ಅವಸ್ಥೆ ಹೊಂದಿದ ನಂತರ ಭೋಗದಿಂದ ಎಲ್ಲ ಪ್ರಾರಬ್ಧ ಕರ್ಮಗಳಿಂದ ನಿವೃತ್ತನಾಗುವನು. ನಂತರ ತಡೆಯಿಲ್ಲದಲೇ ಪರಮಮುಕ್ತನಾಗುವನು. ಇದನ್ನೇ ನಿರ್ಗುಣಮೋಕ್ಷ'' ಎನ್ನುತ್ತಾರೆ. ಈ ಮತದಲ್ಲಿ ಬಂದಿರುವ ಅನೇಕ ವಿಕಲ್ಪಗಳನ್ನು ವಿಜಯೀಂದ್ರರು ಖಂಡಿಸಿದ್ದಾರೆ.

'ಬೆಳ್ಳುಳ್ಳಿಯಿಂದ ಮಾಡಿದ ಪದಾರ್ಥ, ಅದು ಮುಗಿದಾಗ ಮಾಡಿದ ಪಾತ್ರೆಯನ್ನು ತೊಳೆಯುತ್ತಾರೆ. ಆದರೂ ಅದರಲ್ಲಿ ಬೆಳ್ಳುಳ್ಳಿಯ ಪರಿಮಳವಿರುತ್ತದೆ. ಬೆಳ್ಳುಳ್ಳಿ ಹೋದರೂ ಅದರ ವಾಸನೆಯು ಪಾತ್ರೆಯಲ್ಲಿರುವಂತೆ ಬ್ರಹ್ಮಸಾಕ್ಷಾತ್ಕಾರದಿಂದ ಅವಿದ್ಯೆಯು ನಿವೃತ್ತವಾದರೂ ಕೂಡ, ಅವಿದ್ಯೆಯ ಸಂಸ್ಕಾರದ ಅನುವೃತ್ತಿ ಇರುತ್ತದೆ. ಹೀಗಾಗಿ ಜೀವನ್ಮುಕ್ತಿಯ ಅವಸ್ಥೆ ಉಪಪನ್ನವಾಗುತ್ತದೆ' ಎಂದು ಅದ್ವೈತಿಗಳ ಮತ್ತೊಂದು ವಾದ. ಅದೂ ಅನುಪಪನ್ನವೇ. ಹೀಗೆ ಜೀವನ್ಮುಕ್ತಿಯನ್ನು ಒಪ್ಪುವುದಾದರೆ ಅಬಾಧಿತವಾಗುವ ಪ್ರಸಂಗ ಬರುತ್ತದೆ. ಅಜ್ಞಾನವು ಹೇಗೋ ಹಾಗೆ ಅಜ್ಞಾನದ ಸಂಸ್ಕಾರವೂ ಜ್ಞಾನದಿಂದ ನಿವೃತ್ತವಾಗುವುದಿಲ್ಲ ಎಂದಂತಾಯಿತು. ಬ್ರಹ್ಮ-ಚೈತನ್ಯ ಹೇಗೆ ಅಬಾಧಿತ ಹಾಗೆ ಅಜ್ಞಾನದ ಸಂಸ್ಕಾರವೂ ಅಬಾಧಿತ ಎನ್ನುವ ಪ್ರಸಂಗ ಬರುತ್ತದೆ. ಅವಿದ್ಯೆಯ ಲೇಶ ಅನು- ವೃತ್ತವಾಗುತ್ತದೆ ಎಂಬೀ ವಿಷಯದಲ್ಲಿ ಅದ್ವೈತಿಗಳು ಮಾಡುವ ಎಲ್ಲ ವಿಧದ ಆಕ್ಷೇಪಗಳನ್ನು ವಿಜಯೀಂದ್ರರು ಸುಂದರವಾದ ಯುಕ್ತಿಗಳಿಂದ ನಿರಾಕರಿಸಿದ್ದಾರೆ.

ಅದ್ವೈತಿಗಳು ಉದಾಹರಿಸಿದ 'ದಗ್ಧಪಟನ್ಯಾಯ'ವನ್ನು ವಿಜಯೀಂದ್ರರು ವಿಕಲ್ಪಿಸಿ ಅಲ್ಲಲ್ಲಿ ಖಂಡಿಸಿದ್ದಾರೆ. ನಂತರ ಅದ್ವೈತಿಗಳು ಒಪ್ಪಿರುವ ಜೀವನ್ಮುಕ್ತಿಸ್ವರೂಪವನ್ನು ಹಂತಹಂತವಾಗಿ ನಿರಾಕರಿಸಲಾಗಿದೆ.

ಆನಂದಬೋಧ; ಬ್ರಹ್ಮಸಿದ್ಧಿ ಮೊದಲಾದ ಅದ್ವೈತಗ್ರಂಥವಿಶೇಷದಲ್ಲಿ ಹೇಳಲ್ಪಟ್ಟ ಜೀವನ್ಮುಕ್ತಸ್ವರೂಪದ ಖಂಡನೆಯನ್ನು ವಿಸ್ತಾರವಾಗಿ ಮಾಡಲಾಗಿದೆ. ಸುಂದರ ಯುಕ್ತಿ ಕೊಟ್ಟದ್ದು ಹೀಗೆ –

'ಘಟವು ದಂಡದಿಂದ ಜನ್ಯ' ಎನ್ನುವುದಿದೆ. ಆದರಂತೆ 'ದುಃಖದ ಪ್ರಾಗಭಾವವು ಪ್ರಾಯಶ್ಚಿತ್ತದಿಂದ ಜನ್ಯ' ಎಂದು ಯಾರೂ ಲೋಕದಲ್ಲಿ ವ್ಯವಹಾರ ಮಾಡುವುದಿಲ್ಲ. ಆನಂದಬೋಧಕಾರರು 'ಆತ್ಮನಲ್ಲೇ ಅವಿದ್ಯೆಯ ನಿವೃತ್ತಿ ಇದೆ. ಅವಿದ್ಯೆಯ ನಿವೃತ್ತಿಯೇ ಪರಮಮುಕ್ತಿ' ಎಂದಿದ್ದಾರೆ. ಇದನ್ನೂ ಯುಕ್ತಿಗಳಿಂದ ಖಂಡಿಸಲಾಗಿದೆ. ಶತಪಥಬ್ರಾಹ್ಮಣವಾಕ್ಯದಿಂದ ಆತ್ಮನ ನಿವೃತ್ತಿಯು ಸ್ಥಿರ ಎಂಬೀ ವಾದವನ್ನೂ ನಿರಾಕರಿಸಲಾಗಿದೆ.

ಅವಿದ್ಯೆಯ ನಿವೃತ್ತಿಯು ಅಮುಖ್ಯವಾದ ಪುರುಷಾರ್ಥ. ಸಂಸಾರದ ದುಃಖದ ನಿವೃತ್ತಿಯು ಮುಖ್ಯವಾದ ಪುರುಷಾರ್ಥ ಎಂಬೀ ಎರಡು ವಿಧವನ್ನು (ವಾದಗಳನ್ನು) ಖಂಡಿಸಲಾಗಿದೆ.

ಅನಂತರ ಚಿತ್ಸುಖಾಚಾರ್ಯರು ಹೇಳಿರುವ ಅದ್ವೈತಮತದ ಪ್ರಕ್ರಿಯೆಯನ್ನು ಖಂಡಿಸಲಾಗಿದೆ. ಮುಕ್ತಿಯಲ್ಲಿ ಸಂಸಾರದುಃಖದ ನಿವೃತ್ತಿ ಇದೆ. ಅದು ಅವಿದ್ಯೆಯ ನಿವೃತ್ತಿಯಂತೆ ಸುಖದ ಶೇಷರೂಪವಾದುದು. ಆನಂದದ ಪ್ರಾಪ್ತಿ ಸ್ವತಃ ಪುರುಷಾರ್ಥವಾಗಿದೆ. ಅವಿದ್ಯೆಯ ನಿವೃತ್ತಿಯು ಮೋಕ್ಷ ಎಂಬೀ ವಾದವನ್ನು ನಿರಾಕರಿಸಲಾಗಿದೆ. ಸುಖದ ಶೇಷ ಎಂಬುದು ಯುಕ್ತವಲ್ಲ ಎನ್ನಲು ವಿಜಯೀಂದ್ರರು ಸುಂದರ ದೃಷ್ಟಾಂತವನ್ನು ಕೊಟ್ಟಿದ್ದಾರೆ.

ಹೆಂಡತಿ- ಮಕ್ಕಳು- ಬಂಧುಗಳು ಮರಣ ಹೊಂದುತ್ತಾರೆ. ಅದು ನಮ್ಮ ಗಮನಕ್ಕೆ ಬರುತ್ತದೆ. ಮರಣದ ಅನುಸಂಧಾನದ ಪ್ರಯುಕ್ತವಾಗಿ ನಮಗೆ ದುಃಖವಾಗುತ್ತದೆ. ಆದರೆ ಆ ದುಃಖವಾಗುವ ಸಮಯದಲ್ಲೂ, ಅತ್ಯಂತ ಆಪ್ತರ ದರ್ಶನವಾದಾಗ, ಸುಖವಾಗುವುದು ಕಂಡಿದೆ. ದುಃಖಕ್ಕೆ ಪ್ರತಿಬಂಧಕವಿದೆ ಎನ್ನುವುದಾದರೆ ಆಗ ಸುಖವೇ ಇಲ್ಲ ಎಂದಾಗಬೇಕಾದೀತು. ಹೀಗಾಗಿ ಸುಖದ ಶೇಷ ಎಂಬ ವಿಕಲ್ಪ ಸರಿಯಲ್ಲ. ಸುಖದ ಶೇಷ ಎಂದಾಗಿದ್ದರೆ ಆಪ್ತರನ್ನು ಕಂಡಾಗ ಸುಖವಾಗಬಾರದಿತ್ತು. ಆದರೆ ಸುಖ ಕಂಡಿದೆ. ಆದ್ದರಿಂದ ಶೇಷ ಎಂಬುವುದು ಅಯುಕ್ತ-ವೆಂದಂತಾಯಿತು.

ಸ್ರಕ್- ಚಂದನ- ಪ್ರಿಯಳ ಆಲಿಂಗನಾದಿಗಳು ವಿಷಯವಾಗಿವೆ. ಇವುಗಳಿಂದ ಸುಖವಾಗುವುದು ಕಂಡಿದೆ. ದುಃಖದ ಅಭಾವವು ಸ್ವರೂಪಸುಖದ ಅಭಿವ್ಯಕ್ತಿಯನ್ನು ಕುರಿತು ಅನ್ಯಥಾ ಸಿದ್ಧವಾದ ಅನ್ವಯವ್ಯತಿರೇಕಗಳಿಂದ ಕೂಡಿಲ್ಲ. ಹೀಗಿರುವಾಗ ದುಃಖಾಭಾವವು ಸುಖಕ್ಕೆ ಅಭಿವ್ಯಂಜಕ ಎನ್ನಲು ಸುತರಾಂ ಆಗಲಾರದು.

ಹಾಗಾದರೆ ಸುಪ್ತಿಕಾಲದ ಸುಖದ ವ್ಯವಸ್ಥೆ ಹೇಗೆ? ಎಂಬುದನ್ನು ವಿಜಯೀಂದ್ರರು ಹೀಗೆ ಪರಾಮರ್ಶಿಸಿದ್ದಾರೆ.

ಸುಪ್ತಿಕಾಲದಲ್ಲಿ ವಿಷಯಾಂತರಸಂಚಾರ ಜೀವನಿಗಿಲ್ಲ. ಚೆನ್ನಾಗಿ ಸ್ವರೂಪಸುಖದ ಅನುಭವವೇ ಇದೆ. ಸುಪ್ತಿಯಿಂದ ಎದ್ದ ವ್ಯಕ್ತಿ 'ಇಷ್ಟು ಕಾಲದವರೆಗೆ ಸುಖವಾಗಿ ನಿದ್ರಿಸಿದ್ದೆ (ಮಲಗಿದ್ದೆ)' ಎನ್ನುತ್ತಾನೆ. ಇದು ನಿದ್ರೆಯ ನಂತರದ ಪರಾಮರ್ಶೆಯಿಂದ ಸಿದ್ಧವಾದುದು. ಎಲ್ಲರ ಅನುಭವಕ್ಕೂ ಬಂದಿದೆ. ಈ ವಿಧದ ಸಮ್ಯಕ್ ಸ್ವರೂಪ-ಸುಖಾನುಭವವನ್ನೇ ಸುಪ್ತಿಕಾಲದಲ್ಲಿ ಜೀವನು ಅನುಭವಿಸುವನು ಎಂದು ತಿಳಿಯುತ್ತದೆ.

★ 'ಸುಖದ ಶೇಷ'ವಲ್ಲ; ದುಃಖಾಭಾವ ಎನ್ನಲು ವಿಜಯೀಂದ್ರರು ಮತ್ತೆ ಮತ್ತೆ ಕೊಡುವ ಯುಕ್ತಿ- ಅತ್ಯಂತ ಉತ್ಕಟವಾದ ದುಃಖವಿರುವ ಸಮಯದಲ್ಲಿ ಪ್ರಿಯೆಯ ಆಲಿಂಗನ ಮೊದಲಾದವುಗಳಿಂದ ಸುಖ ಹುಟ್ಟುವುದು ಕಂಡಿದೆ. ಹೀಗಾಗಿ 'ಸುಖದ ಶೇಷ' ಎಂಬೀ ವಿಚಾರ ಅಯುಕ್ತ.

★ ಸ್ವರೂಪಸುಖದ ಅನುಭವ ಕಾದಾಚಿತ್ಕ ಎಂಬ ಅದ್ವೈತಿಗಳ ವಾದಕ್ಕೆ ವಿಜಯೀಂದ್ರರು ಕೊಟ್ಟ ಯುಕ್ತಿ. ''ಪುರುಷನೊಬ್ಬ ಸುಪ್ತಿಯಲ್ಲಿ ಸ್ವರೂಪಸುಖವನ್ನು ಚೆನ್ನಾಗಿ ಅನುಭವಿಸಿದ. ಆಗ ಆ ಪುರುಷನಲ್ಲಿ ಸುಖದ ಅನುಭವ ಹೋಯಿತು. ಆಗ ತುಂಬ ಕೋಪ ಬಂದು ಬಯ್ಯುತ್ತಾನೆ; ನಿಮ್ಮ ರೀತಿ ಆಗಿದ್ದರೆ ಅವನಿಗೆ ಕೋಪವೇ ಬರಬಾರದಿತ್ತು''.

★ ನಂತರ 'ಘಟಸಂವೃತಮಾಕಾಶಂ' ಎಂಬ ತ್ರಿಪಾದ್ವಿಭೂತಿ ಮಹಾನಾರಾಯಣೋಪನಿಷತ್ ವಾಕ್ಯಕ್ಕೆ ದ್ವೈತ-ರೀತ್ಯಾ ಅರ್ಥವನ್ನು ಸುಂದರವಾಗಿ ಮಾಡಿದ್ದಾರೆ.

ಈ ಶ್ರುತಿಯ ವಿಚಾರವನ್ನೇ ಅದ್ವೈತಶಿಕ್ಷಾ ಗ್ರಂಥದ ಉತ್ತರಭಾಗದಲ್ಲೂ (ಪು.123) ವಿಜಯೀಂದ್ರರು ನಡೆಸಿರುವುದು ಗಮನಾರ್ಹವಾದ ಅಂಶವಾಗಿದೆ.

★ ನಂತರ 'ಆತ್ಮಾ ವಾ ಇದಮೇಕ ಏವಾಗ್ರೇ ಆಸೀತ್; ನಾನ್ಯತ್ ಕಿಂಚನ ಮಿಷತ್' ಎಂಬೀ ಶ್ರುತಿಗೆ ಸುಂದರವಾಗಿ ಅರ್ಥಮಾಡಲಾಗಿದೆ.

★ ಸಃ = ಪರಮಾತ್ಮನು, ಏತಮೇವ= ತನ್ನನ್ನೇ, ಪುರುಷಂ= ಶರೀರದಲ್ಲಿ ಮಲಗಿರುವ, ಬ್ರಹ್ಮ= ಗುಣ-ಪೂರ್ಣನು, ತತಂ= ದೇಶತಃ ಕಾಲತಃ ವ್ಯಾಪ್ತನಾದವನನ್ನು, ಅಪಶ್ಯತ್= ಕಂಡನು. ಹೀಗೆ ಮತ್ತೊಂದು ಶ್ರುತ್ಯರ್ಥ ನಿರೂಪಿಸಿದ್ದಾರೆ. ಅದ್ವೈತಪರವಾಗಿ ಮೇಲ್ನೋಟಕ್ಕೆ ಕಾಣುವ ಶ್ರುತಿಗಳಿಗೆಲ್ಲ ಯುಕ್ತಿಯನ್ನು ಕೊಟ್ಟು ದ್ವೈತಪರವಾಗಿ ಅರ್ಥೈಸಿರುವುದು ಇಲ್ಲಿ ಕಾಣುತ್ತದೆ.

★ **'ಅಶರೀರಂ ಶರೀರೇಷು ಅನವಸ್ಥೇಷ್ವೇವ ಸ್ಥಿತಂ'** ಶ್ರುತಿಗೆ ಹೀಗೆ ಅರ್ಥೈಸಲಾಗಿದೆ.

ಅಶರೀರಂ = ಪ್ರಾಕೃತಶರೀರವಿಲ್ಲದಿರುವ, ಶರೀರೇಷು= ಅಪ್ರಾಕೃತಶರೀರಗಳಲ್ಲಿ, ಅನವಸ್ಥೇಷು= ಪ್ರಾಣಿಗಳಿಗಿರುವ ಅವಸ್ಥೆ ಇಲ್ಲದಿರುವ, ಅಸ್ತಿ-ಜಾಯತೇ- ಪರಿಣಮತೇ- ವರ್ಧತೇ- ಅಪಕ್ಷೀಯತೇ- ವಿನಶ್ಯತಿ - ಇರುತ್ತದೆ, ಹುಟ್ಟುತ್ತದೆ, ಪರಿಣಾಮವಾಗುತ್ತದೆ, ಬೆಳೆಯುತ್ತದೆ, ಕ್ಷೀಣಿಸುತ್ತದೆ, ನಷ್ಟವಾಗುತ್ತದೆ ಎಂಬೀ ಆರು ಅವಸ್ಥೆಗಳಿಲ್ಲದಿರುವವನು ವಿಭುವಾದ ಪರಮಾತ್ಮನು. ಅವನ ಜ್ಞಾನದಿಂದ ದುಃಖದಿಂದ ದೂರನಾಗುವನು.

★ **'ಬ್ರಹ್ಮ ವೇದ ಬ್ರಹ್ಮೈವ ಭವತಿ'** ಶ್ರುತ್ಯರ್ಥ

ಯಃ = ಯಾವನು, ಬ್ರಹ್ಮ ವೇದ = ಗುಣಪೂರ್ಣನಾದ ಬ್ರಹ್ಮನನ್ನು ತಿಳಿಯುವವನು, (ಸಃ = ಅವನು), ಬ್ರಹ್ಮೈವ ಭವತಿ = ಬ್ರಹ್ಮನನ್ನೇ ಹೊಂದುತ್ತಾನೆ. ಬೇರೆಯದನ್ನಲ್ಲ

★ **'ಅಭಯಂ ವೈ ಜನಕ ಪ್ರಾಪ್ತೋಧಿಸಿ ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮಿ ಇತಿ ತಸ್ಮಾತ್ ಸರ್ವಮಭವತ್ ತತ್ರ ಕೋ ಮೋಹಃ, ಕಃ ಶೋಕಃ ಏಕತ್ವಮನುಪಶ್ಯತಃ'** ಶ್ರುತ್ಯರ್ಥ -

ಹೇ ಜನಕ = ಎಲೈ ಜನಕನೇ! ಯದಾತ್ಮಾನಮೇವ ಅಹಂ ಬ್ರಹ್ಮಾಸ್ಮಿ ಇತಿ ಅವೈತ್ = ಪರಮಾತ್ಮನ ಅಧೀನನಾಗಿ ನಾನಿರುವೆನು ಎಂದು ತಿಳಿದನೋ, ತತ್ = ಆದ್ದರಿಂದ, ಅಭಯಂ ವೈ = ಭಯವಿಲ್ಲದಿರುವಿಕೆಯನ್ನು ಹೊಂದಿರುವೆನು. ತತ್ರ = ಪರಮಾತ್ಮನಲ್ಲಿ, ಏಕತ್ವಂ = ಪರಮಾತ್ಮನಿಗೆ ಸಮಾನವಾದ ಜಾತಿಯ ಎರಡನೆಯ ವಸ್ತುವಿಲ್ಲ- ದಿರುವಿಕೆಯನ್ನು ಅಥವಾ ಪರಮಾತ್ಮನಿಗಿಂತ ಬೇರೆಯದಾಗಿ, ಅನುಪಶ್ಯತಃ = ಅನುಶಾಸ್ತ್ರವಿನ ಶ್ರವಣಾದಿಗಳನ್ನು ಅನುಸರಿಸಿ, ಪಶ್ಯತಃ = ಸಾಕ್ಷಾತ್ಕಾರ ಮಾಡಿಕೊಳ್ಳುವವನಿಗೆ, ಕೋ ಮೋಹಃ ಕಃ ಶೋಕಃ = ಮೋಹವೆಲ್ಲಿಯ? ಎರಡೂ ಎಂದೆಂದಿಗೂ ಇಲ್ಲ

★ 'ತದೇವ ಬ್ರಹ್ಮ ತ್ವಂ ವಿದ್ಧಿ' ಎಂಬ ತಲವಕಾರಶ್ರುತಿಗೆ ಸರಳವಾಗಿಯೂ, ಸುಂದರವಾಗಿಯೂ, ಸೂತ್ರಗಳ ಆಧಾರದಿಂದ ಅರ್ಥೈಸಲಾಗಿದೆ. ಶ್ರುತ್ಯರ್ಥ ವಿವರಿಸುವಾಗ ಯುಕ್ತಿಯನ್ನು ಬಲುಸುಂದರವಾಗಿ ನೀಡಲಾಗಿದೆ. ''ಅಥಾಯಮಶರೀರ....' ಎಂಬೀ ಶ್ರುತಿಯು ಬ್ರಹ್ಮನ ಸಾದೃಶ್ಯವನ್ನು ಹೇಳಿದೆ. ತನ್ಮೂಲಕ 'ಬ್ರಹ್ಮೈವ ತೇಜ ಏವ' ಎಂದಿದೆ. ಜೀವನು ಬ್ರಹ್ಮನಂತಿರುವ ಎಂದಿದೆ. ಲೋಕದಲ್ಲಿ ಸಾದೃಶ್ಯ ಹೇಳುವುದಿದೆ 'ಈ ಮಾಣವಕ ಸಿಂಹನೇ ಸೈ' ಎಂದು. ಇಲ್ಲಿ ಮಾಣವಕನು ಸಿಂಹನಾಗಲಾರ. ಅದರಂತೆ ಶ್ರುತಿಯಲ್ಲೂ ಜೀವ ಬ್ರಹ್ಮನಾಗಲಾರ. ಬ್ರಹ್ಮನಂತೆ ತೇಜಸ್ಸುಳ್ಳವ ಎಂದರ್ಥ ತಿಳಿಯಬೇಕು. ಲೌಕಿಕವಾಕ್ಯಕ್ಕೂ ಶ್ರುತಿವಾಕ್ಯಕ್ಕೂ ವ್ಯತ್ಯಾಸವಿದೆ. ಪೌರುಷೇಯವಾಕ್ಯ ಹೇಳುವ ಸ್ಥಳದಲ್ಲಿ ಸಾದೃಶ್ಯಕ್ಕೆ ಪ್ರಯೋಜಕವಾದುದು ಭೇದ. ಅದು ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದ ಸಿದ್ಧವಾಗಿದೆ. ಆದರೆ ಪ್ರಕೃತದಲ್ಲಿ ಪ್ರತ್ಯಕ್ಷ ಮೊದಲಾದ ಬೇರೆ ಪ್ರಮಾಣದಿಂದ ಹಾಗೂ 'ದ್ವಾಸುಪರ್ಣಾ' 'ಅನ್ಯದೇವ ತದ್ ವಿದಿತಾದ್' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ. ಹೀಗಾಗಿ ಶ್ರುತಿಯಲ್ಲಿ ಜೀವೇಶರ ಭೇದವಿದೆ ಎಂದೇ ಸಿದ್ಧವಾಗುತ್ತದೆ.

ಜ್ಞಾನ ಮತ್ತು ಅಜ್ಞಾನಗಳು ಸಮಾನವಿಷಯವಾಗಿದ್ದರೆ ವಿರೋಧವಿಲ್ಲ, ಬೆಕ್ಕು- ಇಲಿಗಳಂತೆ ಸಮಾನ-ಅಧಿಕೃತತ್ವವಾಗಿ ವಿರೋಧವಿದೆ ಎಂಬ ಪ್ರಕ್ರಿಯೆಯೂ ಸರಿಯಲ್ಲ. ಏಕೆ? ಘಟದ ಜ್ಞಾನದಿಂದ ಘಟದ ಅಜ್ಞಾನವೂ ನಿವೃತ್ತವಾಗುವ ಪ್ರಸಂಗವಿದೆ. ಚೈತ್ರಾತ್ಮನಲ್ಲಿ ಜ್ಞಾನ- ಅಜ್ಞಾನಗಳು ಸಮಾನಾಧಿಕೃತವಾಗಿವೆ. ಆದ್ದರಿಂದ ಜ್ಞಾನ-ಅಜ್ಞಾನಗಳಿಗೆ ವಿರೋಧದ ವಿಷಯದಲ್ಲಿ ಸಮಾನವಿಷಯತ್ವ ಸಮಾನ ಅಧಿಕೃತತ್ವವನ್ನು ಅವಶ್ಯವಾಗಿ ಒಪ್ಪಲೇ ಬೇಕು. ಅಂತಹ ಸಮಾನವಿಷಯತ್ವ ಅಜ್ಞಾನಕ್ಕೆ ಹೇಳಲು ಆಗದಿರುವುದರಿಂದ ಈ ವಿಕಲ್ಪ ಅಯುಕ್ತ ಎಂದಾಯಿತು.

ಇನ್ನೊಂದು ಪ್ರಕ್ರಿಯೆ ಹೀಗಿದೆ - ಜನ್ಯವಾದ ಸುಖವೇ ಇಲ್ಲ, ವಿಷಯಗಳಿಂದ ಸ್ವರೂಪಸುಖವೇ ಅಭಿವ್ಯಕ್ತ-ವಾಗುತ್ತದೆ ಎಂದು. ಇದೂ ಕೂಡ ಅಯುಕ್ತವೇ. ಜನ್ಯಸುಖವಿಲ್ಲದಿದ್ದರೆ ಪ್ರೇಕ್ಷಾವಂತರಿಗೆ ಆ ಆ ಉತ್ಕೃಷ್ಟ ಸುಖದ ಉದ್ದೇಶದಿಂದ ಆ ಆ ಸಾಧನವಿಶೇಷವನ್ನು ಸಂಪಾದಿಸುವುದರಿಂದ ಉತ್ಕೃಷ್ಟ - ಮತ್ತದರ ಸುಖಗಳ ಅನುಭವ ಬಾರದಿರುವ ಪ್ರಸಂಗ ಬಂದೀತು! ಹೀಗೆ ನಾನಾ ಮಜಲಿನಲ್ಲಿ ವಿಜಯೀಂದ್ರರು ಮೋಕ್ಷಕ್ಕೆ ಸಂಬಂಧಿಸಿದ ಅನುಪಪತ್ತಿಗಳನ್ನು ಇಲ್ಲಿ ನಮ್ಮ ಮುಂದಿಟ್ಟಿದ್ದಾರೆ.

★ ನಂತರ ಬ್ರಹ್ಮನ ಆನಂದವು ವ್ಯಾಪ್ಯತ್ವಪ್ರಕಾರವಿದೆ ಎಂಬುದರ ನಿರಾಕರಣೆ ಇಲ್ಲಿ ಮೂಡಿ ಬಂದಿದೆ. ನಂತರ ''ಕಾರ್ಯೋಪಾಧಿರಯಂ ಜೀವಃ' ಎಂಬೀ ಶ್ರುತಿಗೆ ಜೀವೇಶಪರವಾಗಿ ಮನೋಹರವಾಗಿ ಅರ್ಥೈಸಿದ್ದಾರೆ. ನಂತರ ಬಿಂಬ- ಪ್ರತಿಬಿಂಬಭಾವವನ್ನು ಸುಸ್ಫುಟತರವಾಗಿ ನಿರೂಪಿಸಿದ್ದಾರೆ.

''ಪರಮಾತ್ಮ ಅವತರಿಸುವಾಗ ಬ್ರಾಹ್ಮಣರ ಶಾಪವನ್ನು ಸ್ವೀಕರಿಸುತ್ತಾನೆ. ಮರ್ಯಾದಾವನ್ನು ಪರಿಪಾಲಿಸಲು ಹೇಗಾದರೂ ಭೃಗು ಶಾಪ ಮೊದಲಾದದುದನ್ನು ತಿಳಿಸಲು ನಟನೆ ಮಾಡುತ್ತಾನೆ. ಅವನು ಅವತಾರದಲ್ಲಿ ದುಃಖಿಯಾಗಿರುವನೆಂದು ತಿಳಿಯುತ್ತದೆ. ಇದೆಲ್ಲ ನಿರ್ಗುಣಬ್ರಹ್ಮನೆನ್ನಲು ಪೋಷಕವಾಗಿದೆ'' ಎಂಬ ಮತ್ತೊಂದು ವಿಚಾರವೂ ಅಯುಕ್ತವಾದುದು. 'ವಿದ್ವವನ್ ಮುಗ್ಧವಚ್ಚೈವ ಕೇಶವೋ ವೇದ ಸಾರ್ತವತ್' ಎಂಬಿವೇ ಆಗಮಗಳು ಸ್ಪಷ್ಟವಾಗಿ ಪರಮಾತ್ಮನು ಕೇವಲ ನಟನೆ ಮಾಡಿರುವನು. ಅವನಿಗೆ ದುಃಖಾದಿಗಳಿಲ್ಲ ಎಂದು ತಿಳಿಸುತ್ತಿವೆ. ಬೆಂಕಿ-ಮಂಜುಗಳು ಎಷ್ಟು ವಿರುದ್ಧವೋ ಹಾಗೆ ಜೀವ- ಆನಂದಪೂರ್ಣಬ್ರಹ್ಮ ವಿರುದ್ಧ ಸ್ವಭಾವದವರು. ಅವರಿಗೆ ಸದಾ ಭೇದವಿದೆ ಎನ್ನಲೇ ಬೇಕು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ವಿಜಯೀಂದ್ರರು ಈ ವಿಷಯವನ್ನು ವಿಸ್ತಾರವಾಗಿ ತುರೀಯಶಿವಖಂಡನದಲ್ಲಿ (ಪು.34-42)ಮಂಡಿಸಿದ್ದಾರೆ. ನಂತರ 'ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ಶ್ರುತಿಗೆ ಬಲುವಿಸ್ತಾರವಾದ ಅರ್ಥ ಹೇಳಿ, ಅದ್ವೈತಿಗಳ ರೀತ್ಯಾ ಅರ್ಥವನ್ನು ಖಂಡಿಸಿದ್ದಾರೆ.

ಅನಂತರ ಕೊನೆಯ ಭಾಗದಲ್ಲಿ ಮುಕ್ತಿಯಲ್ಲೂ ಬ್ರಹ್ಮಾದಿಗಳಿಗೆ ತಾರತಮ್ಯವಿದೆ ಎಂಬ ವಿಷಯವನ್ನು ಶ್ರುತಿ-ಸ್ಮೃತಿ- ಸೂತ್ರಗಳಿಂದ ಬಹು ವಿಸ್ತಾರವಾಗಿ ಸಮರ್ಥಿಸಿದ್ದಾರೆ. ತಾವು ಹೇಳಿದ ಅರ್ಥ ಸಮರ್ಥಿಸಲು ಸೂತ್ರಭಾಷ್ಯ, ನ್ಯಾಯವಿವರಣ, ತ್ರಿವಿಕ್ರಮಪಂಡಿತಾಚಾರ್ಯರ ತತ್ತ್ವಪ್ರದೀಪಾದಿ ಗ್ರಂಥಗಳನ್ನು ಉದಾಹರಿಸಿದ್ದಾರೆ.

ಹೀಗೆ ತಾರತಮ್ಯವೆಂಬುದು ಸತ್ಯ, ಮುಕ್ತಾಮುಕ್ತಬ್ರಹ್ಮರುದ್ರಾದಿಗಳಿಗೆ ನಿಯಾಮಕನು ಭಗವಾನ್ ಶ್ರೀನರಸಿಂಹನು, ಅವನೇ ಸರ್ವೋತ್ತಮನು ಎಂದು ಸಿದ್ಧವಾಗುತ್ತದೆ ಎಂದು ಉಪಸಂಹಾರ ಮಾಡಿದ್ದಾರೆ.

ಈ ನಾಲ್ಕನೇ ಪರಿಚ್ಛೇದದಲ್ಲಿಯೂ ಕೂಡ ನ್ಯಾಯಾಮೃತ 4ನೇ ಪರಿಚ್ಛೇದದ ಕೊನೆಯಭಾಗದ ಕೆಲವು ಪಂಕ್ತಿಗಳು ಅನುಕರಿಸಲ್ಪಟ್ಟಿವೆ.

ಹೀಗೆ ಶ್ರುತ್ಯರ್ಥಸಾರವು ನಾಲ್ಕು ಪರಿಚ್ಛೇದಗಳಲ್ಲಿ ಬಹು ಸುಂದರವಾಗಿ ಮೂಡಿ ಬಂದಿದೆ. ವಿಜಯೀಂದ್ರರ ಈ ಮೇರುಕೃತಿ ಮಾಧ್ವಮತದ ಎಲ್ಲ ಪ್ರಮೇಯಗಳ ಸಾಮಾನ್ಯಾಕಾರದ ಮಾಹಿತಿಯನ್ನು ಸಮಗ್ರವಾಗಿ ಒಳಗೊಂಡಿದೆ. ತತ್ತ್ವಬುಭುತ್ಸುಗಳಿಗೆ ಅತ್ಯಂತ ಆಹ್ಲಾದಕರವಾದ, ವಿಚಾರವಂತರಿಗೆ ಚರ್ಚಿಸಲು ಬೇಕಾದ ಸಾಕಷ್ಟು ಮಾಹಿತಿಗಳುಳ್ಳ ಶ್ರುತಿಯ ಅರ್ಥ ಆಸ್ವಾದಿಸುವವರಿಗೆ ರಸದೌತಣ ನೀಡಲಿದೆ.

## ಸಂಶೋಧನೆಯ ಬಗ್ಗೆ

'ಶ್ರುತ್ಯರ್ಥಸಾರ' ಗ್ರಂಥವನ್ನು ಸಮಗ್ರ ಸಂಪಾದಿಸಲು ಅದರ ಪ್ರತಿ ದೊರೆತದ್ದು ಭಾವಿಸಮೀರ ಶ್ರೀವಾದಿರಾಜ ಮಠದ ಪೀಠಾಧಿಪತಿಗಳಾದ ಶ್ರೀಶ್ರೀವಿಶ್ವೋತ್ತಮತೀರ್ಥ ಶ್ರೀಪಾದರ ಪರಮಾನುಗ್ರಹದಿಂದ. ಅವರು ಈ ಗ್ರಂಥದ ಎರಡು ಪ್ರತಿಗಳನ್ನು ಕೊಟ್ಟು, ಅಡಿಟಿಪ್ಪಣಿಗಳನ್ನು ಹಾಕಿ, ಚೆನ್ನಾಗಿ ಹೊರತರುವಂತೆ ನನಗೆ ಆಶೀರ್ವದಿಸಿ ಕೊಟ್ಟ ಫಲವಾಗಿ ಇಂದು ಈ ಗ್ರಂಥ ಹೊರಬಂದಿದೆ. ''ಇಚ್ಛಾಮರಣಿ''ಗಳೆಂದೇ ಪ್ರಸಿದ್ಧರಾದ, ಮಂತ್ರಸಿದ್ಧರೂ, ಅತ್ಯಂತ ಶಾಸ್ತ್ರದ ತಳಸ್ಪರ್ಶವುಳ್ಳವರೂ, ವಾದಿರಾಜರ ಎಲ್ಲ ಗ್ರಂಥಗಳನ್ನು ಮುಖೋದ್ಗತ ಮಾಡಿಕೊಂಡಿದ್ದವರೂ, ಈ ಶತಕದ ಏಕೈಕ ಋಷಿಗಳೆಂದರೆ ಅದು ಶ್ರೀವಿಶ್ವೋತ್ತಮತೀರ್ಥರೇ. ಈ ವಿಚಾರವೆಲ್ಲರಿಗೂ ಚೆನ್ನಾಗಿ ತಿಳಿದಿದೆ. ಶ್ರೀವಿಶ್ವೋತ್ತಮತೀರ್ಥರ ಮತ್ತೊಂದು ವೈಶಿಷ್ಟ್ಯವೆಂದರೆ ಈ ತನಕ ಯಾರಿಗೂ ತಿಳಿಯದ ವಿಜಯೀಂದ್ರರ ಗ್ರಂಥದ

ಹೆಸರನ್ನು ಹೇಳುತ್ತಿದ್ದುದು. ವಿಜಯೀಂದ್ರರ ಗ್ರಂಥವನ್ನು ತಾಳಪತ್ರದಲ್ಲೇ ಚೆನ್ನಾಗಿ ಅಧ್ಯಯನ ಮಾಡಿ, ಆಪ್ತರಿಗೆ ''ಹೀಗೆ ವಿಜಯೀಂದ್ರರು ಇಂತಹ ಗ್ರಂಥದಲ್ಲಿ ಹೀಗೆ ನುಡಿದಿದ್ದಾರೆ. ಗ್ರಂಥ ಓದಿ; ಬಲು ಸೊಗಸಾಗಿದೆ'' ಎನ್ನು-ತ್ತಿದ್ದರು. ಅವರು ನುಡಿದ ಈ ಮಾತು ಸತ್ಯವಾಗಿತ್ತು. ಈಗಲೂ ಹಾಗೇ ಇದೆ. ಇಂತಹ ಪರಮಪೂಜ್ಯರು ಶ್ರೀಮಠ-ದಿಂದ ಹೊರತರಲು ಅನುಗ್ರಹಿಸಿದುದು ಮಹಾಭಾಗ್ಯವಾಗಿದೆ. ಸಜ್ಜನರು ಅವರನ್ನು ಪ್ರತಿದಿನ ಸ್ಮರಿಸಬೇಕು.

ದೊರಕಿದ ಈ ಗ್ರಂಥದ ಪ್ರತಿಯ ಲಿಪಿ ತುಳು. ಅದನ್ನು ಸಂಸ್ಕೃತಲಿಪಿಗೆ ಲಿಪ್ಯಂತರಗೊಳಿಸಿದವರು ವಿ|| ಕೃಷ್ಣಮೂರ್ತಿಭಟ್ಟರು. ಇವರು ನನ್ನ ಗುರುಗಳಾದ ಕೀರ್ತಿಶೇಷ ವಿ|| ಸಾಣೂರು ಭೀಮಭಟ್ಟರ ಪುತ್ರರು. ಕೃಷ್ಣಮೂರ್ತಿಗಳವರೇ ಈ ಗ್ರಂಥವನ್ನು ಪೂರ್ಣ ಹೊರತರುವಲ್ಲಿ ನನ್ನ ಬೆನ್ನೆಲುಬಾಗಿ ಇದ್ದವರು. ಪ್ರತಿಹಂತದಲ್ಲೂ ಉಚಿತ ಸಲಹೆಗಳನ್ನಿತ್ತು, ಗ್ರಂಥಪಾತವಾಗದಂತೆ ತಾಳ್ಮೆಯಿಂದ ಲಿಪ್ಯಂತರಗೊಳಿಸಿ, ಪ್ರೂಫ್ ನೋಡುವಾಗ ಕೆಲವೆಡೆ ಹಲವು ಅಪೂರ್ವಮಾಹಿತಿಗಳನ್ನು ನೀಡಿ, ಗ್ರಂಥ ಪೂರ್ಣ ಹೊರಬರುವಂತೆ ಮಾಡಿದ್ದಾರೆ. ಅವರ ಅತ್ಯಂತ ಸಲಹೆ ಸಹಕಾರಗಳು ಇದ್ದುದ್ದರಿಂದ ಈ ಗ್ರಂಥಸಂಶೋಧನೆ ಮಾಡಲು ಆಯಿತು. ಕೆಲವೆಡೆ ತ್ರುಟಿತವಾಗಬಹುದಾಗಿದ್ದ ಭಾಗವನ್ನು ಸಂರಕ್ಷಿಸಿ, ಅಕ್ಷರವನ್ನು ಓದಿ ಉಳಿಸುವಲ್ಲಿ ತುಂಬಾ ಶ್ರಮಪಹಿಸಿದ್ದಾರೆ. ನನ್ನ ಹೃತ್ಪೂರ್ವಕ ಪ್ರಣಾಮಗಳು ಮತ್ತು ಕೃತಜ್ಞತೆಗಳನ್ನು ಅಭಿನಂದನೆಗಳನ್ನು ಅವರಿಗೆ ಸಲ್ಲಿಸುತ್ತೇನೆ.

ಈ ಗ್ರಂಥ ಹೊರತರಲು ಸುಮಾರು 8ವರ್ಷಗಳ ಕಾಲ ಹಿಡಿಯಿತು. ತಾಳೆವಲಿಯನ್ನು ಶುದ್ಧಮಾಡಿ, ಲಿಪ್ಯಂತರ ಗೊಳಿಸಲು ಸುಮಾರು 2 ವರ್ಷಗಳು. ಅದರ ನಂತರ ಅಕ್ಷರಜೋಡಣೆ ಮೊದಲಾದವುಗಳಿಗೆ ಆಗಿದೆ. ದೇಶೀ ತಂತ್ರಜ್ಞಾನದಲ್ಲಿ ತಯಾರಾದ ''ಶ್ರೀಲಿಪಿ'' ಎಂಬ ಸಾಫ್ಟ್‌ವೇರ್ ಬಳಸಿ ಅಕ್ಷರವನ್ನು ಮುದ್ದಾಗಿ ಚಿತ್ರಿಸಲಾಗಿದೆ. ಉಪಲಬ್ಧವಿದ್ದ ತಾಳೆವಲಿಯಲ್ಲಿ ಅಕ್ಷರಗಳು ಅಸ್ಪಷ್ಟವಾಗಿದ್ದು ಅದನ್ನು ಬಹಳ ಪ್ರಯತ್ನಪಟ್ಟು ಶುದ್ಧವಾದ ಪಾಠದಿಂದ ಗ್ರಂಥ ಹೊರತರಲಾಗಿದೆ. ಪ್ರತಿಪುಟದಲ್ಲೂ ಸುಮಾರು 3-4 ಅಡಿಟಿಪ್ಪಣಿಗಳನ್ನು ಹಾಕಲಾಗಿದೆ. ಪಾಠಾಂತರ-ವಿದ್ದುದನ್ನು ಸಾಧ್ಯವಾದಷ್ಟು ಮೂಲದ ಜೊತೆಗೆ ನೀಡಲಾಗಿದೆ. ವಿಜಯೀಂದ್ರರು ಉಲ್ಲೇಖಿಸುವ ಎಷ್ಟೋ ಪಾಠಗಳಿಂದು ಉಪಲಬ್ಧವಿಲ್ಲ, ಆದರ ಮಾಹಿತಿಯನ್ನು ಆಯಾಯ ಪುಟಗಳ ಕೆಳಗೆ ಕೊಡಲಾಗಿದೆ. ಎಲ್ಲ ಶ್ರುತಿಗಳ ಹೆಸರು - ಸಂಖ್ಯೆ ಇತ್ಯಾದಿಗಳ ವಿವರ ಆ ಆ ಶ್ರುತಿವಾಕ್ಯಗಳ ಜೊತೆಗೆ ನೀಡಲಾಗಿದೆ. ಇದರಿಂದ ಓದುಗರಿಗೆ ಸುಲಭವಾಗಿ ಆ ವಾಕ್ಯಗಳ ಚಿತ್ರಣ ಮನಸ್ಸಿಗೆ ಬರಲಿದೆ.

ಮೂಲಗ್ರಂಥದಲ್ಲಿ ಯಾವುದೇ ವಿಭಾಗಗಳು ಇಲ್ಲಷ್ಟಿ; 4ನೆಯ ಪರಿಚ್ಛೇದದ ಉಲ್ಲೇಖದ ಹೊರತಾಗಿ ಬೇರೆಯ ವಿಭಾಗ ಕಾಣುವುದಿಲ್ಲ. ಆಆ ವಿಷಯಕ್ಕೆ ಅನುಗುಣವಾಗಿ ವಿಭಾಗ ಮಾಡಲಾಗಿದೆ. ವಿಜಯೀಂದ್ರರ ಗ್ರಂಥಗಳ ಪಂಕ್ತಿಗೆ ಅನ್ವಯ ತಿಳಿಯುವುದು ಕಷ್ಟಸಾಧ್ಯ. ಆದರೆ ಇಲ್ಲಿ ಸಾಧ್ಯವಾದಷ್ಟು ಕಡೆಗೆ 'ಅನ್ವಯ ಇಂತಹ ಕಡೆ ಇದೆ' ಎಂದು ಅಡಿಟಿಪ್ಪಣಿಯಲ್ಲಿ ಸೂಚಿಸಲಾಗಿದೆ.

ಈ ಗ್ರಂಥದ ಸಂಶೋಧನೆಯಿಂದ ಇನ್ನೊಂದು ವಿಚಾರ ತಿಳಿಯುತ್ತದೆ. 'ಅದ್ವೈತಶಿಕ್ಷಾ' ಗ್ರಂಥವು ಶ್ರುತ್ಯರ್ಥ-ಸಾರಕ್ಕಿಂತ ಮೊದಲೇ ರಚಿತವಾಗಿದೆ. ಆದರ ಉಲ್ಲೇಖವನ್ನು ವಿಜಯೀಂದ್ರರು 'ಇತಿ ಶಿಕ್ಷಾಯಾಂ' ಎಂದು ಉಲ್ಲೇಖಿಸಿದ್ದಾರೆ. ಹಾಗೂ ಶ್ರವಣವಿಧಿವಿಲಾಸಗ್ರಂಥವೂ ಕೂಡ ಪೂರ್ವದಲ್ಲಿ ರಚಿತವಾಗಿದೆ ಎಂಬುದು ಈ ಗ್ರಂಥದಿಂದ ತಿಳಿದುಬರುತ್ತದೆ.

ವ್ಯಾಸರಾಜರ ಗ್ರಂಥಗಳ ಉಲ್ಲೇಖ ಬಂದಾಗ ಆ ಗ್ರಂಥದ ಪಂಕ್ತಿ ಮತ್ತು ಇತರ ವಿವರಣೆಗಳನ್ನು ಕೊಡಲಾಗಿದೆ. ಹಲವು ಸ್ಥಳಗಳಲ್ಲಿ ಮೂಲ ಅರ್ಥವಾಗಲು ವಿಜಯೀಂದ್ರರ ನ್ಯಾಯಾಮೃತ ಲಘ್ವಾಮೋದದ ಪಂಕ್ತಿಗಳನ್ನು ಕೊಡಲಾಗಿದೆ. ಶಾಂಕರಬ್ರಹ್ಮಸೂತ್ರಭಾಷ್ಯದ ತಾತ್ಪರ್ಯತಃ ಅನುವಾದವಿದ್ದ ಸ್ಥಳದಲ್ಲಿ ಅದನ್ನು ಕೆಳಗೆ ನಮೂ-ದಿಸಲಾಗಿದೆ. ಕೆಲವು ಶ್ರುತಿ - ಸ್ಮೃತಿಗಳ ವಾಕ್ಯ ಮೂಲದಲ್ಲಿ ಪೂರ್ಣವಿಲ್ಲ, ಅವುಗಳ ಪೂರ್ಣಪಾಠವನ್ನು ಅಡಿಟಿಪ್ಪಣಿಯಲ್ಲಿ ನೀಡಲಾಗಿದೆ. ಕೆಲವು ಕಡೆ ಜೈಮಿನಿಸೂತ್ರಗಳ ಪೂರ್ಣಪಾಠ ನೀಡಲಾಗಿದೆ. ಮೂಲಗ್ರಂಥದಲ್ಲಿ ಪಂಕ್ತಿಯೊಡನೆ ಕೆಲವು ಮಾಹಿತಿ ಕೊಡಲು ಆಗುವುದಿಲ್ಲ, ಅಂತಹ ಸ್ಥಳಗಳಲ್ಲಿ ಸೂಕ್ತ ಆಧಾರಗಳ ಮೂಲಕ ಆ ಆ ಆಕರಗಳ ಪಟ್ಟಿ ಅದೇ ಪುಟದಲ್ಲಿ ಕೆಳಗೆ ಕೊಡಲಾಗಿದೆ. ತಾಳೆಪತ್ರದಲ್ಲಿ ಅಶುದ್ಧವಿದ್ದ ಭಾಗವನ್ನು ಶುದ್ಧಮಾಡಿ ತಾಳೆಪತ್ರದ ಪಾಠವನ್ನು ಉಲ್ಲೇಖಿಸಲಾಗಿದೆ. ಕೆಲವೆಡೆ ತಾಳೇಪತ್ರದ ವಾಕ್ಯವನ್ನು ಹಾಗೆಯೇ ಕೊಟ್ಟು ಕೆಳಗೆ ಪ್ರಾಯಶಃ ಹೀಗೆ ಪಾಠವಿರಬಹುದು ಎಂಬುದನ್ನು ''ಇತಿ ಸ್ಯಾತ್'' ಎಂದು ನಮೂದಿಸಲಾಗಿದೆ.

ಇನ್ನು ಎರಡೂ ತಾಳೆಪತ್ರಗಳಲ್ಲಿ ಕೆಲವೆಡೆ ಲಿಪಿಕಾರರೇ ಸಾಕಷ್ಟು ಸ್ಥಳ ಬಿಟ್ಟಿದ್ದು, ಪ್ರಾಯಃ ಅವರಿಗೂ ಆ ಗ್ರಂಥದ ಭಾಗ ಸಿಗದಿರುವುದರಿಂದ, ಹಾಗೆ ಸ್ಥಳ ಬಿಟ್ಟಿದ್ದಾರೆಂದು ಊಹಿಸಿ ಅಂತಹ ಜಾಗದಲ್ಲಿ ''..........'' ಎಂದು ಚಿಹ್ನೆ ಹಾಕಲಾಗಿದೆ. ಕೆಲವೆಡೆ 'ಇಂತಹ ಕಡೆ ತಿಳಿಸಲಿದ್ದೇವೆ' ಎಂಬಿವೇ ವಾಕ್ಯಗಳು ಬಂದಾಗ ಆ ಭಾಗ ಎಲ್ಲಿದೆ ಎಂಬುದನ್ನು ಕೆಳಗೆ ನೀಡಲಾಗಿದೆ. ವಿಜಯೀಂದ್ರರು ಉಲ್ಲೇಖಿಸಿದ ಅವರ ಇತರ ಸ್ವತಂತ್ರಗ್ರಂಥಗಳಲ್ಲಿ ಯಾವ ಭಾಗದಲ್ಲಿ ಹೇಳಿದ್ದಾರೆ ಎಂಬುದನ್ನು ಸಂಕ್ಷೇಪವಾಗಿ ಒಂದೇ ಸಾಲಿನಲ್ಲಿ ನೀಡಲಾಗಿದೆ.

ಇನ್ನೊಂದು ದೊಡ್ಡ ಸಮಸ್ಯೆ ಎಂದರೆ ವಿಜಯೀಂದ್ರರು ಉಲ್ಲೇಖಿಸುವ ಶ್ರುತಿಗಳು ಕೆಲವು ಈಗ ಅನುಪಲಬ್ಧವು. ಅಂತಹವುಗಳಿಗೆ ಯಾವುದೇ ಆಕರವನ್ನು ಕೊಟ್ಟಿಲ್ಲ, ಪ್ರಸಿದ್ಧವಾದ ದಶೋಪನಿಷತ್ತು ಅಲ್ಲದೇ ಉಪನಿಷತ್ ಸಂಗ್ರಹದಲ್ಲಿರುವ ಹಲವಾರು ಉಪನಿಷತ್‌ಗಳ ಅರ್ಥಚಿಂತನೆಯನ್ನು ವಿಜಯೀಂದ್ರರು ಮಾಡಿದ್ದಾರೆ. ಅವುಗಳ ಆಕರಸಂಖ್ಯೆ ಎಲ್ಲವನ್ನೂ ಕೊಡಲಾಗಿದೆ. ಶ್ರುತಿಯ ಸ್ವಾರಸಿಕಪಾಠ ಹೀಗಿರಬಹುದು ಎಂದು ಅದನ್ನೂ ನಮೂ-ದಿಸಲಾಗಿದೆ. ಭಾಮತೀ, ಆನಂದಬೋಧ, ಚಿತ್ಸುಖ ಮೊದಲಾದ ಗ್ರಂಥಗಳ ಉಲ್ಲೇಖ ಬಂದಾಗ, ತತ್ಸಂಬಂಧಿ ವಾಕ್ಯಗಳ ಆಕರ ಅದೇ ಪುಟದಲ್ಲಿ ನೀಡಲಾಗಿದೆ. ಈಗ ಮುದ್ರಿತವಾದ ಪುಸ್ತಕಗಳಲ್ಲಿ ವಿಜಯೀಂದ್ರರ ಪಂಕ್ತಿಗಳು ಅನುಪಲಬ್ಧವಾಗಿದ್ದು ಅದನ್ನು ಯೋಗ್ಯಸ್ಥಳದಲ್ಲಿ ಸೂಚಿಸಲಾಗಿದೆ. ಗಾತ್ರದಲ್ಲಿ ಅತ್ಯಂತವಿಸ್ತಾರವಾದದ್ದು 1ನೇ ಪರಿಚ್ಛೇದ. ಅತ್ಯಂತ ಚಿಕ್ಕದ್ದು 3ನೆಯ ಪರಿಚ್ಛೇದ. ಇತರ ಮತೀಯರು ಹಿಡಿದಿರುವ ಪ್ರತೀಕವನ್ನು, ಹಾಗೂ ವಿಜಯೀಂದ್ರರು ಹೇಳಿರುವ ಪ್ರತೀಕವನ್ನು ಪ್ರತ್ಯೇಕವಾಗಿ ನಮೂದಿಸಿದೆ. ವಿಜಯೀಂದ್ರರು ಹೇಳುವ ಶ್ರುತಿವಾಕ್ಯಕ್ಕೂ ಈಗಿನ ವಾಕ್ಯಕ್ಕೂ ಬಹಳ ವ್ಯತ್ಯಾಸಗಳು ಕಂಡು ಬರುತ್ತವೆ. ಆ ವ್ಯತ್ಯಾಸಗಳನ್ನು ಅಡಿಟಿಪ್ಪಣಿಯಲ್ಲಿ ನೀಡಲಾಗಿದೆ. ವಿಜಯೀಂದ್ರರ ಪಂಕ್ತಿಗಳು ಸಾಲು ಸಾಲಾಗಿರುವುದರಿಂದ, ಅದನ್ನು ಅರ್ಥಮಾಡಿಕೊಳ್ಳಲು, ಹಲವೆಡೆ ದಂಡ, ಕೆಲವು ಕಡೆ ಕಾಮಾ, ಪೂರ್ಣವಿರಾಮ ಇವುಗಳನ್ನು ಬಳಸಲಾಗಿದೆ. ಇದರಿಂದ ಓದುವವರಿಗೆ ಅರ್ಥ ಸುಗಮ-ವಾದೀತೆಂದು ಭಾವಿಸಲಾಗಿದೆ. ಕೆಲವೆಡೆ ಕ್ವಚಿತ್ ತಾಲಪತ್ರೇಷು ಎಂದು ಉಲ್ಲೇಖಿಸಿದೆ. ಅರ್ಥಾತ್ ಎರಡು ತಾಳಪ್ರತಿಗಳೆಂದೇ ಅದರ ಅರ್ಥ ತಿಳಿಯುವುದು.

'ವಿಸ್ತೃತಂ ಚೈತದನ್ಯತ್ರ' ಎಂಭ ವಾಕ್ಯ ಸಾಮಾನ್ಯಾಕಾರದಿಂದ ಗ್ರಂಥದೆಲ್ಲೆಡೆ ಕಂಡು ಬರುತ್ತದೆ. ಅಂತಹ ಸಂದರ್ಭದಲ್ಲಿ ಅನ್ಯತ್ರ ಹೇಳಲ್ಪಟ್ಟ ಗ್ರಂಥದ ವಾಕ್ಯಗಳನ್ನು ನೀಡಲಾಗಿದೆ. ಕೆಲವೆಡೆ ಅಸ್ಪಷ್ಟವಿದ್ದು, ಅದನ್ನು ಇನ್ನೂ ಸರಿಪಡಿಸುವ ಆವಶ್ಯಕತೆ ಇದೆ.

ಕೊನೆಯಲ್ಲಿ ವಿಜಯೀಂದ್ರರು ಉದಾಹರಿಸಿರುವ ಶ್ರುತಿಗಳ ಪಟ್ಟಿ ಕೊಡಲಾಗಿದೆ. ಕೆಲವು ನ್ಯಾಯಗಳ ವಿವರಣೆಯನ್ನೂ, ಕೋಶ- ವ್ಯಾಕರಣಸೂತ್ರ ಮೊದಲಾದವುಗಳನ್ನು ಕೊಡಲಾಗಿದೆ. ಸುಮಾರು 30ಗ್ರಂಥಗಳ ಸಹಾಯವನ್ನು ಈ ಗ್ರಂಥಸಂಶೋಧನಾಕಾರ್ಯದಲ್ಲಿ ಬಳಸಲಾಗಿದೆ. ನಾನು ಉದಾಹರಿಸಿರುವ ಸಂಜ್ಞೆಗಳ ಪಟ್ಟಿಯನ್ನು ಕೊನೆಯಲ್ಲಿ ನೀಡಲಾಗಿದೆ.

ಇನ್ನು ಈ ಗ್ರಂಥವು ಶ್ರೀಮಠದಿಂದ ಈ ಹಿಂದೆ ಮುದ್ರಿತವಾಗಿತ್ತು. ಅದು ಅಸಂಪೂರ್ಣವೂ, ಪಂಕ್ತಿಗಳ ಲೋಪವುಳ್ಳದ್ದಾಗಿತ್ತು. ಅದಷ್ಟನ್ನೂ ಈ ಬಾರಿ ಸರಿಪಡಿಸಿ ಶುದ್ಧಪಾಠ ತರುವಲ್ಲಿ ಪ್ರಯತ್ನಿಸಲಾಗಿದೆ.

ಈ ಗ್ರಂಥವನ್ನು ಶ್ರೀಮಠದಿಂದ ಹೊರತರಲು ಹಾರೈಸಿದವರು **''ನಡೆದಾಡುವ ರಾಘವೇಂದ್ರ''ರೆಂದೇ ಪ್ರಸಿದ್ಧರಾದ ಶ್ರೀಸುಶಮೀಂದ್ರತೀರ್ಥ ಶ್ರೀಪಾದರು.** ಅವರು ಈ ಗ್ರಂಥವನ್ನು ಅವಶ್ಯವಾಗಿ ಮಾಡಿ; ಶ್ರೀರಾಘ-ವೇಂದ್ರ ಗುರುಸಾರ್ವಭೌಮರು ಸದಾ ನಿಮ್ಮೊಂದಿಗೆ ಇದ್ದಾರೆ ಎಂದು ನುಡಿದುದು ಸತ್ಯ. ಅವರಿಗೆ ನನ್ನ ಸಾಷ್ಟಾಂಗ ನಮಸ್ಕಾರಗಳು.

ನಂತರದವರು **ಶ್ರೀಸುಯತೀಂದ್ರಶ್ರೀಪಾದರು.** ಅವರು ಈ ಗ್ರಂಥ ಸಂಶೋಧನೆಗೆ ಸಹಕರಿಸಿ ಮಠದಿಂದ ಹೊರತರಲು ಅನುಗ್ರಹಿಸಿದ್ದಾರೆ. ಅವರಿಗೂ ನನ್ನ ನಮನಗಳು.

ನಂತರ ಅಧುನಾ ವಿರಾಜಮಾನರಾದ **ಶ್ರೀಸುಬುಧೇಂದ್ರತೀರ್ಥರು.** ಅವರು ನನಗೆ 'ನೀವೇ ಈ ಗ್ರಂಥದ ಸಂಪಾದಕತ್ವವನ್ನು ಹೊತ್ತು ವಿಜಯೀಂದ್ರರ ವೃಂದಾವನಪ್ರವೇಶದ 400ನೆಯ ವರ್ಷದ ಆರಾಧನಾ ಸಮಯದಲ್ಲಿ ಕುಂಭಘೋಣದಲ್ಲಿ ಮೂಲವೃಂದಾವನದ ಸನ್ನಿಧಿಯಲ್ಲಿ ಹೊರತರಬೇಕೆಂದು ಆಜ್ಞಾಪಿಸಿ ಹರಸಿದ್ದಾರೆ. ಅದರ ಫಲವಾಗಿ ಈ ಗ್ರಂಥ ಹೊರಬಂದಿದೆ. ಅವರಿಗೂ ನನ್ನ ಸಾಷ್ಟಾಂಗ ನಮಸ್ಕಾರಗಳು.

ಇನ್ನು ಶ್ರೀಮಠದ ಹಿರಿಯ ವಿದ್ವಾಂಸರಾದ **ರಾಜಾ ಎಸ್. ಗಿರಿ ಆಚಾರ್ಯರಿಗೂ,** ಪ್ರಾಂಶುಪಾಲರಾದ **ಡಾ|| ವಾದಿರಾಜಾಚಾರ್ಯರಿಗೂ, ಆರ್.ವಿ. ಪಂಚಮುಖಿಯವರು, ರೋಚನಾಚಾರ್ಯರು, ಸುಯಮೀಂದ್ರಾಚಾರ್ಯರು, ರಾಜಗೋಪಾಲಾಚಾರ್ಯರು, ಸಿಬ್ಬಂದಿಯ ಇತರ ವರ್ಗದವರಿಗೂ,** ಸಲಹೆ ನೀಡಿ ಈ ಗ್ರಂಥ ಹೊರಬರಲು ಸಹಕರಿಸಿರುತ್ತಾರೆ. ಅವರೆಲ್ಲರಿಗೂ ನನ್ನ ನಮನಗಳು. ಹಾಗೂ ಹೃತ್ಪೂರ್ವಕ ಅಭಿನಂದನೆಗಳು. ಈ ಗ್ರಂಥಕ್ಕೆ ಪರೋಕ್ಷವಾಗಿಯೂ, ಅಪರೋಕ್ಷವಾಗಿಯೂ ಸಹಕರಿಸಿದ ಎಲ್ಲಾ ವಿದ್ವಾಂಸರು-ಗಳಿಗೂ ನನ್ನ ನಮನಗಳು.

ಕೊನೆಯ ಮಾತು ಈ ತನಕ ಪ್ರಕಟವಾಗದ, ಅತ್ಯಂತ ಬೃಹತ್ತಾದ ಶ್ರೀವಿಜಯೀಂದ್ರರ ಗ್ರಂಥವನ್ನು ಹೊರತರಲು ನಾನು ಅಸಮರ್ಥ. ಭಾವಿಸಮೀರ ಶ್ರೀವಾದಿರಾಜರು, ಶ್ರೀವಿಜಯೀಂದ್ರರು, ಕಲಿಯುಗದ ಕಾಮಧೇನು ಶ್ರೀರಾಘವೇಂದ್ರಗುರುಸಾರ್ವಭೌಮರೇ ನನ್ನಲ್ಲಿ ನಿಂತು ಈ ಗ್ರಂಥಸಂಪಾದನೆ ಮಾಡಿಸಿದ್ದಾರೆ. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ನನಗೆ ಸುಧಾಂತದ ವರೆಗಿನ ಎಲ್ಲ ಪಾಠಗಳನ್ನು ಹೇಳಿ, ಈ ಗ್ರಂಥಸಂಶೋಧನೆಯನ್ನು ಮಾಡುವವರೆಗೂ ವಿದ್ಯೆಯ ಬೀಜವನ್ನು ಬಿತ್ತು, ಸನ್ಮಾರ್ಗದಲ್ಲಿ ಪ್ರಚೋದಿಸಿದ ಗುರುಗಳಾದ ಕೀರ್ತಿಶೇಷ ವಿದ್ವಾನ್ ಸಾಣೂರು ಭೀಮಭಟ್ಟರನ್ನು ಅನವರತ ನಿರಂತರ ಸ್ಮರಿಸುತ್ತಾ ಅವರ ಪಾದಾರವಿಂದಗಳಲ್ಲಿ ಶ್ರದ್ಧಾಭಕ್ತಿ ಪೂರ್ವಕ ನಮನ ಸಲ್ಲಿಸುವೆನು. ಈ ಗ್ರಂಥದಿಂದ ಸಂಪಾದಿಸಿದ ಪುಣ್ಯ ನನ್ನ ಗುರುಗಳಿಗೆ ಸಮರ್ಪಿತವಾಗುತ್ತದೆ. ಚಿಕ್ಕ-ಮಕ್ಕಳಿಂದಾರಂಭಿಸಿ, ವಿದ್ವತ್‌ವರೆಗಿನ ವಿದ್ಯಾರ್ಥಿಗಳಿಗೂ ಒಂದೇ ವಿಧದ ಪಾಠವನ್ನು ಹೇಳುತ್ತಾ, ಒಂದು ದಿನಕ್ಕೆ ಸುಮಾರು 12-13ಗಂಟೆಗಳ ಕಾಲ ಕೇವಲ ಪಾಠಪ್ರವಚನಕ್ಕೇ ಜೀವನವನ್ನು ಮೀಸಲಾಗಿಟ್ಟಿದ್ದ ಅಜಾತ

ಶತ್ರುವಿನಂತಿದ್ದ, ಮಧ್ವಮತದ ಗ್ರಂಥಗಳ ಅಧ್ಯಯನ ನಿರಂತರ ಮಾಡಿದ್ದ, ನನ್ನ ಗುರುಗಳನ್ನು ನಾನೆಂದೂ ಮರೆಯುವಂತಿಲ್ಲ. ಇಂತಹ ಗುರುಗಳು ಲೋಕದಲ್ಲಿ ದುರ್ಲಭವೆಂದರೆ ಅತಿಶಯವಾಗಲಾರದು. ವಸ್ತುತಃ ನಾನವರ ಕೊನೆಯ ಕಾಲದಲ್ಲಿ ಅವರಲ್ಲಿ ಸ್ವಲ್ಪಮಾತ್ರ ಅಧ್ಯಯನ ಮಾಡಲು ಸಾಧ್ಯವಾಯಿತು. ಅದನ್ನು ವಿಶಾಲ ಮಾಡಿದ್ದು ಅವರ ಅನುಗ್ರಹವಷ್ಟೇ; ಬೇರೇನಿಲ್ಲ. ಶ್ರೀವಾದಿರಾಜ-ರಾಘವೇಂದ್ರರನ್ನು ಸ್ವಪ್ನದಲ್ಲಿ ಕಂಡು, ಅವರ ಆಶೀರ್ವಾದಕ್ಕೆ ಪಾತ್ರರಾಗಿದ್ದರು ಅವರೆಂಬುದು ಮತ್ತೊಂದು ಹಿರಿಯ ಸಂಗತಿ. ಶ್ರೀಮಠದ ಹಲವಾರು ಪುಸ್ತಕಗಳನ್ನು ನನ್ನ ಗುರುಗಳು ಸಂಶೋಧಿಸಿ ಹೊರಗೆ ತಂದಿರುವುದು ಎಲ್ಲರಿಗೆ ತಿಳಿದ ವಿಷಯ. ಗುರುಗಳ ಅನುಗ್ರಹದಿಂದ ಈ ಗ್ರಂಥ ಹೊರಗೆ ಬಂದಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ಇನ್ನು ನನಗೆ ಮಂತ್ರೋಪದೇಶವಿತ್ತು, ಸದಾ ಮಧ್ವಗ್ರಂಥಗಳ ಅಧ್ಯಯನ ಮಾಡಲು ಅನುಗ್ರಹಿಸಿದ ಶ್ರೀವಿದ್ಯಾಮಾನ್ಯತೀರ್ಥರಿಗೂ ನನ್ನ ಅನಂತಾನಂತ ನಮಸ್ಕಾರಗಳು. ಇನ್ನು ವಿಶ್ವೋತ್ತಮತೀರ್ಥರು ನನ್ನನ್ನು ಆಶೀರ್ವದಿಸಿ, ನನ್ನಲ್ಲಿ ಉತ್ಸಾಹ ತುಂಬಿ ವಾದಿರಾಜರ-ವಿಜಯೀಂದ್ರರ ಗ್ರಂಥಗಳ ಅಧ್ಯಯನದ ಮೂಲಕ ಸಂಶೋಧನೆ ಕಾರ್ಯದಲ್ಲಿ ತೊಡಗಿಸಿದ್ದಾರೆ. ಅವರನ್ನೆಂದೂ ಮರೆಯುವಂತಿಲ್ಲ. ಅವರಿಗೂ ನನ್ನ ಅನಂತಾನಂತ ಸಾಷ್ಟಾಂಗನಮಸ್ಕಾರಗಳು. ಅವರ ಶಿಷ್ಯರಾದ ಶ್ರೀವಿಶ್ವವಲ್ಲಭತೀರ್ಥರಿಗೂ ನನ್ನ ನಮನಗಳು.

ಇನ್ನು ನನಗೆ ಸುಧಾ- ಚಂದ್ರಿಕಾ - ಯುಕ್ತಿಮಲ್ಲಿಕಾ ಗ್ರಂಥಗಳ ಪಾಠವನ್ನು ಮಾಡಿ, ವಿದ್ಯೆಯ ಪರಿಪೂರ್ಣತೆ-ಯನ್ನು ತಂದುಕೊಟ್ಟ ಶ್ರೀರಾಮಚಂದ್ರನ ಪಾದಾರಾಧಕರಾದ ಪಲಿಮಾರುಮಠದ ಶ್ರೀವಿದ್ಯಾಧೀಶತೀರ್ಥ ಶ್ರೀಪಾದರಿಗೂ ನನ್ನ ಅನಂತಾನಂತ ನಮನಗಳು. ಈಗಲೂ ನನ್ನನ್ನು ಸಂಶೋಧನಾಕಾರ್ಯದಲ್ಲಿ, ಲೇಖನಗಳ ಮೂಲಕ ಪ್ರೋತ್ಸಾಹಿಸಿ, ಅನುಗ್ರಹಿಸುತ್ತಿರುವ ಅವರಿಗೆ ನನ್ನ ಅನಂತಾನಂತ ನಮನಗಳನ್ನೆರಗುವೆ.

ಈ ಸಂಶೋಧನಾಕಾರ್ಯದಲ್ಲಿ ಹಲವಾರು ಲೋಪದೋಷಗಳು ತಲೆದೋರಿರಬಹುದು. ಅದನ್ನು ವಿದ್ವಾಂಸರು ಸಹೃದಯದಿಂದ ತಿಳಿಸಿದರೆ, ಮುಂದಿನ ಪ್ರಕಟನೆಯಲ್ಲಿ ತಿದ್ದುಪಡಿ ಮಾಡಲಾಗುತ್ತದೆ. ಈ ಸಂಶೋಧನಾ ಕಾರ್ಯದಲ್ಲಿ ಸಹಕರಿಸಿದ ಹಲವಾರು ವ್ಯಕ್ತಿಗಳಿಗೆ ನನ್ನ ಅಭಿನಂದನೆಗಳು. ಕರಡು ಪ್ರತಿಗಳನ್ನು ಸೂಕ್ತಕಾಲದಲ್ಲಿ ತಲುಪಿಸಿ, ನಿರಂತರವಾಗಿ ಸಹಕಾರವಿತ್ತ ಎಸ್.ಎನ್. ರಾಮಚಂದ್ರ ಅವರಿಗೆ ಧನ್ಯವಾದಗಳು. ಪೇಜ್ ಲೇಔಟ್ ಮಾಡಿ, ಅಕ್ಷರಸಂಯೋಜಿಸಿದ ಕೆಂಪದಾಳಿಹಳ್ಳಿ ಸುಬ್ಬಣ್ಣನವರಿಗೆ ನನ್ನ ಅಭಿನಂದನೆಗಳು.

ಈ ಗ್ರಂಥವನ್ನು ಅಧ್ಯಯನ ಮಾಡಿ, ಶ್ರೀವಿಜಯೀಂದ್ರಗುರ್ವಂತರ್ಗತ ಮಧ್ವಾಂತರ್ಗತ ಶ್ರೀಲಕ್ಷ್ಮೀನರಸಿಂಹನ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ನಾನು ಆಶಿಸಿ, ವಿರಮಿಸುವೆ.

ವಿಜಯೀಂದ್ರಗುರೂನ್ ವಂದೇ ನೃಸಿಂಹಪರಿಚಾರಕಾನ್ ।
ವಾದೇ ವಿಜಯದಾನ್ ನಿತ್ಯಂ ಜ್ಞಾನಭಕ್ತ್ಯಾದ್ಯುತಾನ್ ಸದಾ ॥
ಶ್ರೀನೃಸಿಂಹಪದಾಸಕ್ತಾನ್ ವಿಜಯೀಂದ್ರಗುರೂನ್ನುಮಃ ।
ಯೇಷಾಂ ಸ್ಮರಣಮಾತ್ರೇಣ ಮೂಕೋಽಪಿ ವಿಬುಧಾಯತೇ ॥

ಇತಿ ಶಮ್,

ಹರಿಗುರುಚರಣಸೇವಾಕಾಂಕ್ಷಿ,
ತ್ರಿವೇದೀ ವಿದ್ವಾನ್ ಉಂಡಾರು ಶ್ರೀನಿವಾಸಮೂರ್ತಿ ಆಚಾರ್ಯ

# विषयसूची

***

॥श्रीः॥

# ॥ सर्वतन्त्रस्वतन्त्रश्रीमद्विजयीन्द्रभिक्षुविरचितश्रुत्यर्थसारः ॥

॥ श्री वेदव्यासाय नमः ॥ ॥ श्री गुरुभ्यो नमः ॥ हरिः ॥ ॐ ॥

## मङ्गलाचरणम्

सर्वज्ञं सर्वकर्तारं सर्वजीवजडात्मकात् ।
प्रपञ्चाद्वस्तुतोऽत्यन्तभिन्नं श्रीनृहरिं भजे ॥१॥

तं पाणिपल्लवं बाहुशाखं सद्विजसेवितम् ।
विद्याहासलतापुष्पं मध्वकल्पतरुं(द्रुमं) भजे ॥२॥

मध्वशास्त्रमहाचापमनुद्धार्यमपीतरैः ।
उद्धृत्य कीर्तिमालेभे यो जयस्तमिमं भजे ॥३॥

यो व्यासमुनिदावाग्निः सच्छास्त्रमरुता सह ।
ददाह कुमतारण्यं प्रकाशाय तमाश्रये ॥४॥

मूकोऽपि वावदूकेन्द्रो जायते यदनुग्रहात् ।
श्रीसुरेन्द्रगुरो(मुनेः)स्तस्य पादौ नत्वा गिरं भजे ॥५॥

धर्मोज्जीवनमात्रलोलुपतया कर्णाटसिंहासने
स्थित्वाऽपि क्षितिरक्षणं विदधतः श्रीरङ्गरायस्य(राजस्य) यः ।
प्राणो रायसनारसिंहसचिवस्तेनार्थितस्तन्मुदे
कुर्वेऽहं विजयीन्द्रसंयमिमणिः श्रुत्यर्थसारं सुधीः ॥६॥

### ॥ अथ नृहरेः जीवजडात्मकप्रपञ्चात् अभेदसमर्थनम् ॥

ननु परब्रह्मस्वरूपस्य श्रीनृहरेर्नसर्वजीवजडात्मकात् प्रपञ्चाद्वस्तुतोऽत्यन्तभेदोऽस्ति । मानाभावात् । प्रत्युत तस्य तदभेद एव स्वीकर्तुमुचितः । 'तत्त्वमसि' 'अयमात्मा ब्रह्म' 'ब्रह्मविद् ब्रह्मैव भवति' 'स एवेदं सर्वम्' 'इदं सर्वं यदयमात्मा' इत्यादितदभेदावेदकश्रुतीनां सत्वात् ॥

***

॥श्रीः॥

# ॥ सर्वतन्त्रस्वतन्त्रश्रीमद्विजयीन्द्रभिक्षुविरचितश्रुत्यर्थसारः ॥

**॥ श्री वेदव्यासाय नमः ॥ ॥ श्री गुरुभ्यो नमः ॥ हरिः ॥ ॐ ॥**

## मङ्गलाचरणम्

सर्वज्ञं सर्वकर्तारं सर्वजीवजडात्मकात् ।
प्रपञ्चाद्वस्तुतोऽत्यन्तभिन्नं श्रीनृहरिं भजे ॥१॥

तं पाणिपल्लवं बाहुशाखं सद्विजसेवितम् ।
विद्याहासलतापुष्पं मध्वकल्पतरुं(द्रुमं) भजे ॥२॥

मध्वशास्त्रमहाचापमनुद्धार्यमपीतरैः ।
उद्धृत्य कीर्तिमालेभे यो जयस्तमिमं भजे ॥३॥

यो व्यासमुनिदावाग्निः सच्छास्त्रमरुता सह ।
ददाह कुमतारण्यं प्रकाशाय तमाश्रये ॥४॥

मूकोऽपि वावदूकेन्द्रो जायते यदनुग्रहात् ।
श्रीसुरेन्द्रगुरो(मुनेः)स्तस्य पादौ नत्वा गिरं भजे ॥५॥

धर्मोज्जीवनमात्रलोलुपतया कर्णाटसिंहासने
स्थित्वाऽपि क्षितिरक्षणं विदधतः श्रीरङ्गरायस्य(राजस्य) यः ।
प्राणो रायसनारसिंहसचिवस्तेनार्थितस्तन्मुदे
कुर्वेऽहं विजयीन्द्रसंयमिमणिः श्रुत्यर्थसारं सुधीः ॥६॥

### ॥ अथ नृहरेः जीवजडात्मकप्रपञ्चात् अभेदसमर्थनम् ॥

ननु परब्रह्मस्वरूपस्य श्रीनृहरेर्नसर्वजीवजडात्मकात् प्रपञ्चाद्वस्तुतोऽत्यन्तभेदोऽस्ति । मानाभावात् । प्रत्युत तस्य तदभेद एव स्वीकर्तुमुचितः । 'तत्त्वमसि' 'अयमात्मा ब्रह्म' 'ब्रह्मविद् ब्रह्मैव भवति' 'स एवेदं सर्वम्' 'इदं सर्वं यदयमात्मा' इत्यादितदभेदावेदकश्रुतीनां सत्वात् ॥

नच 'नाहमीश्वरो, नाहं सर्वज्ञः' इत्यादि जीवेश्वरभेदग्राहिप्रत्यक्षादिप्रमाणविरोधात् 'तत्त्वमस्यादि'श्रुतीनाममुख्यार्थतैव युक्तेति वाच्यम् । 'नान्योऽतोऽस्ति द्रष्टा नान्योऽतोऽस्ति द्रष्टृ' 'नेह नानाऽस्ति किञ्चन' 'एकमेवाद्वितीयम्' 'नेति नेति' 'अतोऽन्यदार्तम्' इत्यादि नित्यनिर्दोषश्रुतिनिषिद्धभेदविषयत्वेन, सम्भावितदोषत्वेन च तद्भेदग्राहिप्रत्यक्षादेः अप्रमाणत्वेन तदभेदावेदकश्रुत्यपरिपन्थित्वात् । नच तासामतत्परत्वेन ततो जीवेश्वराभेदसिद्धिः (नजीवेश्वरैक्यसिद्धिः-पा)। उपक्रमादिरूपतात्पर्यलिङ्गवत्वेन तासामतत्वपरत्वासिद्धेः । तथाहि । 'सदेव सोम्येदमग्र आसीत्' इत्युपक्रमात् । 'ऐतदात्म्यमिदं सर्वम्' इत्युपसंहारात् । 'तत्त्वमसि तत्त्वमसि' इति नवकृत्वोऽभ्यासात् । मानान्तराप्राप्तत्वरूपापूर्वत्वात् । एकविज्ञानेन सर्वविज्ञानरूपात् फलात् । सृष्टि-स्थिति-प्रलय-प्रवेश-नियमनरूपात् पञ्चविधार्थवादात् । मृदादिदृष्टान्तरूपोपपत्तिश्च, तासां जीवेश्वराभेदपरत्त्वमेव निश्चीयते । नहि लिङ्गसत्त्वे लिङ्ग्यसत्त्वमभ्युपगमार्हम् । नह्युपक्रमादीनां तात्पर्यलिङ्गत्वे विवादोऽस्ति । यदाहुः –

'उपक्रमोपसंहारावभ्यासोऽपूर्वता फलम् ।
अर्थवादोपपत्ती च लिङ्गं तात्पर्यनिर्णये'इति(१) ।। इति चेदत्र ब्रूमः ।।

।। इति नृहरेः जीवजडात्मकप्रपञ्चात् अभेदसमर्थनम् ।।

**।। अथ श्रीनृहरेः जीवजडात्मकप्रपञ्चात् अत्यन्तभेदसमर्थनम् ।।**

न जीवेश्वराभेदो जडेश्वराद्यभेदो वा स्वीकारार्हः । आथर्वण-मुण्डक-श्वेताश्वतरयोश्च

'द्वासुपर्णा सयुजा सखाया समानं वृक्षं परिषस्वजाते ।
तयोरन्यः पिप्पलं स्वाद्वत्त्यनश्नन्नन्यो अभिचाकशीति ।।

समाने वृक्षे पुरुषो निमग्नो (निषण्णः) अनीशया शोचति मुह्यमानः ।
जुष्टं यदा पश्यत्यन्यमीशमस्य महिमानमिति वीतशोकः ।।(२)

---

(१) समन्वयाधिकरणसूत्रभाष्योदाहृतबृहत्संहितावाक्यम् ।।

(२) 'एतीति शोक' इति पाठान्तरम् ।।

तथा श्वेताश्वतरे एव – 'आत्माप्यनीशः सुखदुःखहेतोः'

'पृथगात्मानं प्रेरितारं च मत्वा जुष्टस्ततस्तेनामृतत्वमेति'

'ज्ञाज्ञौ द्वावजावीशानीशौ अनीशश्चात्मा मुह्यते भोक्तृभावात्'[१]

'अत्रान्तरो वेदविदो विदित्वा लीना ब्रह्मणि तत्परा योनिमुक्ताः '[२]

'आरभ्यकर्माणि गुणान्वितानि भावांश्च सर्वान् विनियोजयेद्यः ।

तेषामभावे कृतकर्मनाशः कर्मक्षये याति स तत्त्वतोऽन्यः' तथा तत्रैव,

'अस्मान्मायी सृजते विश्वमेतत् तस्मिंश्चान्यो मायया सन्निरुद्धः'

तथाऽन्यत्राथर्वणे 'द्वे ब्रह्मणी वेदितव्ये परं चापरं च', तदर्थस्तु बृहन्नारदीये व्याख्यातः

'आत्मानं द्विविधं विद्यात् परापरविभेदतः ।
द्वे ब्रह्मणी वेदितव्ये इति चाथर्वणीश्रुतिः' इति ।।

तथा 'भिन्नोऽचिन्त्यः परमो जीवसङ्घात् पूर्णः परो जीवसङ्घो ह्यपूर्णः'[३] 'सत्य आत्मा, सत्यो जीवः, सत्यं भिदा सत्यं भिदा सत्यं भिदा' 'सत्यं ज्ञानमनन्तं ब्रह्म' तथाऽन्यत्र 'य आत्मनि तिष्ठन्' 'नित्यो नित्यानां चेतनश्चेतनानाम्' 'अजो ह्येको जुषमाणोऽनुशेते जहात्येनां भुक्तभोगामजोऽन्यः' इत्यादिश्रुतिभिः 'नैतदिच्छन्ति पुरुषमेकं कुरुकुलोद्वह' 'अन्यश्च परमो राजन् तथाऽन्यः पञ्चविंशकः' 'उत्तमःपुरुषस्त्वन्यः' 'यथेश्वरश्च जीवश्च सत्यभेदौ परस्परम्' इत्यादिस्मृतिभिः, 'भेदव्यपदेशात्'(ब्र-सू-१-३-५), 'भेद-व्यपदेशाच्चान्यः'(ब्र-सू-१-१-२१), 'शारीरश्चोभयेऽपि हि भेदेनैनमधीयते'(ब्र-सू-१-२-२०) 'पृथगुपदेशात्'(ब्र-सू-२-३-२८) इत्यादिश्रुत्यर्थनिर्णायकन्यायनिबन्धनात्मकैः सूत्रैश्च, जीवे-श्वरभेदस्यैवावेदनात् । तथा –

---

(१) 'अनीशश्चात्मा बुद्ध्यते भोक्तृभावात्' इति इदानीन्तनपाठः ।।

(२) 'ये निर्मुक्ताः' इति पाठान्तरम् ।।

(३) पृथगुपदेशात् (ब्र-सू-२-३-२८) इति सूत्रभाष्योदाहृतकौशिकश्रुतिः ।।

नच 'नाहमीश्वरो, नाहं सर्वज्ञः' इत्यादि जीवेश्वरभेदग्राहिप्रत्यक्षादिप्रमाणविरोधात् 'तत्त्वमस्यादि'श्रुतीनाममुख्यार्थतैव युक्तेति वाच्यम् । 'नान्योऽतोऽस्ति द्रष्टा नान्योऽतोऽस्ति द्रष्टृ' 'नेह नानाऽस्ति किञ्चन' 'एकमेवाद्वितीयम्' 'नेति नेति' 'अतोऽन्यदार्तम्' इत्यादि नित्यनिर्दोषश्रुतिनिषिद्धभेदविषयत्वेन, सम्भावितदोषत्वेन च तद्भेदग्राहिप्रत्यक्षादेः अप्रमाणत्वेन तदभेदावेदकश्रुत्यपरिपन्थित्वात् । नच तासामतत्परत्वेन ततो जीवेश्वराभेदसिद्धिः (नजीवेश्वरैक्यसिद्धिः-पा)। उपक्रमादिरूपतात्पर्यलिङ्गवत्वेन तासामतत्वपरत्वासिद्धेः । तथाहि । 'सदेव सोम्येदमग्र आसीत्' इत्युपक्रमात् । 'ऐतदात्म्यमिदं सर्वम्' इत्युपसंहारात् । 'तत्त्वमसि तत्त्वमसि' इति नवकृत्वोऽभ्यासात् । मानान्तराप्राप्तत्वरूपापूर्वत्वात् । एकविज्ञानेन सर्वविज्ञानरूपात् फलात् । सृष्टि-स्थिति-प्रलय-प्रवेश-नियमनरूपात् पञ्चविधार्थवादात् । मृदादिदृष्टान्तरूपोपपत्तिश्च, तासां जीवेश्वराभेदपरत्त्वमेव निश्चीयते । नहि लिङ्गसत्त्वे लिङ्ग्यसत्त्वमभ्युपगमार्हम् । नह्युपक्रमादीनां तात्पर्यलिङ्गत्वे विवादोऽस्ति । यदाहुः –

'उपक्रमोपसंहारावभ्यासोऽपूर्वता फलम् ।
अर्थवादोपपत्ती च लिङ्गं तात्पर्यनिर्णये'इति[१] ।। इति चेदत्र ब्रूमः ।।

।। इति नृहरेः जीवजडात्मकप्रपञ्चात् अभेदसमर्थनम् ।।

**।। अथ श्रीनृहरेः जीवजडात्मकप्रपञ्चात् अत्यन्तभेदसमर्थनम् ।।**

न जीवेश्वराभेदो जडेश्वराद्यभेदो वा स्वीकारार्हः । आथर्वण-मुण्डक-श्वेताश्वतरयोश्च

'द्वासुपर्णा सयुजा सखाया समानं वृक्षं परिषस्वजाते ।
तयोरन्यः पिप्पलं स्वाद्वत्त्यनश्नन्नन्यो अभिचाकशीति ।।

समाने वृक्षे पुरुषो निमग्नो (निषण्णः) अनीशया शोचति मुह्यमानः ।
जुष्टं यदा पश्यत्यन्यमीशमस्य महिमानमिति वीतशोकः ।।[२]

(१) समन्वयाधिकरणसूत्रभाष्योदाहृतबृहत्संहितावाक्यम् ।।

(२) 'एतीति शोक' इति पाठान्तरम् ।।

तथा श्वेताश्वतरे एव – 'आत्माप्यनीशः सुखदुःखहेतोः'

'पृथगात्मानं प्रेरितारं च मत्वा जुष्टस्ततस्तेनामृतत्वमेति'

'ज्ञाज्ञौ द्वावजावीशानीशौ अनीशश्चात्मा मुह्यते भोक्तृभावात्'(१)

'अत्रान्तरो वेदविदो विदित्वा लीना ब्रह्मणि तत्परा योनिमुक्ताः '(२)

'आरभ्यकर्माणि गुणान्वितानि भावांश्च सर्वान् विनियोजयेद्यः ।

तेषामभावे कृतकर्मनाशः कर्मक्षये याति स तत्त्वतोऽन्यः' तथा तत्रैव,

'अस्मान्मायी सृजते विश्वमेतत् तस्मिंश्चान्यो मायया सन्निरुद्धः'

तथाऽन्यत्राथर्वणे 'द्वे ब्रह्मणी वेदितव्ये परं चापरं च', तदर्थस्तु बृहन्नारदीये व्याख्यातः

'आत्मानं द्विविधं विद्यात् परापरविभेदतः ।
द्वे ब्रह्मणी वेदितव्ये इति चाथर्वणीश्रुतिः' इति ।।

तथा 'भिन्नोऽचिन्त्यः परमो जीवसङ्घात् पूर्णः परो जीवसङ्घो ह्यपूर्णः'(३) 'सत्य आत्मा, सत्यो जीवः, सत्यं भिदा सत्यं भिदा सत्यं भिदा' 'सत्यं ज्ञानमनन्तं ब्रह्म' तथाऽन्यत्र 'य आत्मनि तिष्ठन्' 'नित्यो नित्यानां चेतनश्चेतनानाम्' 'अजो ह्येको जुषमाणोऽनुशेते जहात्येनां भुक्तभोगामजोऽन्यः' इत्यादिश्रुतिभिः 'नैतदिच्छन्ति पुरषमेकं कुरुकुलोद्वह' 'अन्यश्च परमो राजन् तथाऽन्यः पञ्चविंशकः' 'उत्तमःपुरषस्त्वन्यः' 'यथेश्वरश्च जीवश्च सत्यभेदौ परस्परम्' इत्यादिस्मृतिभिः, 'भेदव्यपदेशात्'(ब्र-सू-१-३-५), 'भेदव्यपदेशाच्चान्यः'(ब्र-सू-१-१-२१), 'शारीरश्चोभयेऽपि हि भेदेनैनमधीयते'(ब्र-सू-१-२-२०) 'पृथगुपदेशात्'(ब्र-सू-२-३-२८) इत्यादिश्रुत्यर्थनिर्णायकन्यायनिबन्धनात्मकैः सूत्रैश्च, जीवेश्वरभेदस्यैवावेदनात् । तथा –

---

(१) 'अनीशश्चात्मा बुद्ध्यते भोक्तृभावात्' इति इदानीन्तनपाठः ।।

(२) 'ये निर्मुक्ताः' इति पाठान्तरम् ।।

(३) पृथगुपदेशात् (ब्र-सू-२-३-२८) इति सूत्रभाष्योदाहृतकौशिकश्रुतिः ।।

'स्वप्नमायासरूपेति सृष्टिरन्यैर्विकल्पिता' ।
'भोगार्थं सृष्टिरित्यन्ये क्रीडार्थमिति चापरे',

'वेदान्तविज्ञानसुनिश्चितार्था सन्न्यासयोगाद् यतयः शुद्धसत्त्वाः ।
ते ब्रह्मलोके तु परान्तकाले परामृतात् परिमुच्यन्ति सर्वे'

'अन्यद्युष्माकमन्तरं बभूव'
'अविद्यायामन्तरे वर्तमानाः नान्यच्छ्रेयो वेदयन्ते'
'अन्यावाचो विमुञ्चथ'
'नान्यः पन्था विद्यतेऽयनाय'
'नान्यः पन्था विमुक्तये'
'यत्र नान्यत् पश्यति नान्यत् शृणोति नान्यद् विजानाति तन्मर्त्यम्'
'अन्यमीशम्'

इत्यादिश्रुतिभिर्जीवेश्वरयोः परस्परभेदस्य जडेश्वरयोः परस्परभेदस्य चावेदनात् ।।(जीवपरस्परभेदस्य, जीवजडपरपस्परभेदस्य चावेदनात् -पा) ।।

।। इति श्रीनृहरेः जीवजडात्मकप्रपञ्चात् अत्यन्तभेदसमर्थनम् ।।

## ।। अथ जीवेश्वरभेदादौ श्रुत्यादिप्रमाणानि ।।

तथा 'यजति-ददाति-जुहोति'इत्यादौ शब्दान्तरात् 'समिधो यजति''तनूनपातं यजति' 'इडो यजति' 'बर्हिर्यजति''स्वाहाकारं यजति' (तै-सं-२-५-११) इत्यादौ प्रत्यभिज्ञायमानपुनःश्रुतिरूपाभ्यासात्, 'सप्तदशप्राजापत्यान् पशूनालभते' इत्यादौ सङ्ख्यातः, (जै-सू-२-२-२१) 'अथैष ज्योतिरथैष विश्वज्योतिरथैष सर्वज्योतिः' इत्यादौ सञ्ज्ञातः, (जै-सू-२-२-२२) 'वाजिभ्यो वाजिनम्' इत्यादौ द्रव्य-देवता-रूपाद्गुणात्(रूपगुणात्-पा) (जै-सू-२-२-१३) 'कुण्डपायिनामयने मासमग्निहोत्रं जुहोति' 'मासं दर्शपूर्णमासाभ्यां यजेत(यजते-पा)' इत्यादौ प्रकरणान्तराच्च, कर्मणामिव 'एष एव जीवं प्रबोधयति एतस्माज्जीव उत्तिष्ठति' इत्यादौ विरुद्धार्थधातुनिष्पन्नाख्यातरूपशब्दान्तरात्, 'नित्यपरो नित्यो जीवः' इत्यादौ

अप्रत्यभिज्ञायमानपुनःश्रुतिरूपाभ्यासात्, 'द्वासुपर्णा' इत्यादौ सङ्ख्यातः, 'सखाया' 'अश्नन् अनश्नन्' इति तत्रैवोक्ताद् गुणान्तरात्, 'अनादि मायया सुप्तो यदा जीवः' इति 'धातुः प्रसादात् महिमानमीशम्' इति च, तत्र तत्र जीव इति ईश इत्यादिसञ्ज्ञातः, 'यतो वाचो निवर्तन्ते' इत्यादौ प्रकरणान्तराच्च जीवेशयोः परस्परभेदस्य सिद्धेश्च ॥

॥ इति जीवेश्वरभेदादौ श्रुत्यादिप्रमाणानि ॥

## ॥ अथ जीवेश्वरभेदे तात्पर्यलिङ्गानि ॥

ननु जीवेश्वरपरस्परभेदावेदकश्रुतीनामतत्परत्वान्न ताभ्यः तत्सिद्धिरिति चेन्न । षड्विधतात्पर्यलिङ्गवत्त्वेन तासां भेदपरत्वस्य दुर्निवारत्वात् । सन्ति चाथर्वणे भेदश्रुतावुपक्रमादिषड्विधतात्पर्यलिङ्गानि । तथाहि– तत्र 'द्वासुपर्णा' इत्युपक्रमः । 'परं साम्यमुपैति' इत्युपसंहारः । 'तयोरन्यः' 'अनश्नन्नन्यः' इत्यभ्यासः । शास्त्रैकगम्येश्वरप्रतियोगिकस्य तद्धर्मिकस्य वा कालत्रयाबाध्यभेदस्य विना शास्त्रमप्राप्तेरपूर्वता । 'पुण्यपापे विधूय' इति फलम् । 'अस्य महिमानम्' इति श्रुति(स्तुति-पा)रूपोऽर्थवादः । 'अत्ति' 'अनश्नन्' इत्युपपत्तिः ।

यद्यप्यत्रोपक्रमे द्वित्वसङ्ख्या वाचित्वेन प्रसिद्धो 'द्वि'शब्द एवास्ति । तथाऽपि 'मायामात्रमिदं द्वैतम्' इत्यादाविव 'द्वि'शब्द एव भेदपरोऽत्रावसीयत इति न कश्चिद्दोषः । वस्तुतस्तु अन्योन्याभाव-वैधर्म्य-द्विपृथक्त्वादिवद् द्वित्वमपि भेदशब्दार्थ इति भवत्येव तस्यायमुपक्रमः । नचैवं भेदशब्दस्य नानार्थकत्वापत्तिः । द्वित्वादौ अविगीताऽनादिभेदव्यवहारदर्शनेन ग्रामशब्दादिवत्तदनेकार्थत्वस्येष्टत्वात् ॥

यद्वा 'द्वि'शब्दस्तदाक्षेपकोऽस्तु । तथाऽपि द्वित्वसङ्ख्यैव ऐक्यविरोधिनीत्युपक्रमस्य न भेदविषयत्वहानिः । एवं 'परमं साम्यमुपैति' इत्युपसंहारोऽपि भेदविषय एव । तद्भिन्नत्वे सति तद्गतभूयोधर्मवत्त्वस्यैव सादृश्यापरपर्याय(स्य)समत्वरूपत्वात् । अत एव 'नायं सः किन्तु तत्सदृशः' 'नायं तत्सदृशः किन्तु स एव' इति समत्वैक्ययोरेकतरविधानायान्यतरनिषेधः, स सर्वलोकसिद्धः उपपद्यते । 'गगनं गगनाकारम्'(१) इत्यादि तु तत्समान-

(१) सागरः सागरोपमः इत्यादिवत् इति भगवद्गीतातात्पर्यवचनम् (२अध्याये)

वस्त्वन्तरनिषेधपरमेवेति न किञ्चिदनुपपन्नम् । किञ्चोपक्रमोपसंहारयोरिव अभ्यासादेस्तात्पर्यलिङ्गत्वाविशेषात् तदभावेऽप्यभ्यासादित एव भेदे तात्पर्यसिद्धिरविकला ॥

॥ इति जीवेश्वरभेदे तात्पर्यलिङ्गानि ॥

## ॥ अथ द्वासुपर्णा इति श्रुतेः भेदपरसमर्थनम् ॥

यद्यपि 'तयोरन्यः' इति 'अन्य'शब्दस्य 'तयोर्मध्ये एकः' इत्यर्थकत्वेन भिन्नपरत्वाभावेन न तमादाय भेदाभ्यासत्वमुपपद्यते । तथाऽपि द्वितीय-तृतीय'अन्य'शब्दयोः न भेदाभ्यासत्वक्षतिः । किञ्च 'तयोरन्यः' इत्यत्रापि साक्षात् अन्योन्याभावापरनामकभेदवाचिनो 'अन्य'शब्दस्य सत्वेन नोक्तशङ्कावकाशः । नच 'अन्य'शब्दस्य 'तयोर्मध्ये एकः' इत्यर्थकत्वावश्यम्भावेन भेदपरत्वे मानाभावः । भेदवाचिनो 'अन्य'शब्दस्य एक इत्यर्थकत्वे एव मानाभावात् । 'तयोर्मध्ये योऽन्यः' इत्यस्य 'तयोर्मध्ये विद्यमानो यो भिन्नः' इत्यर्थलाभेन भेदस्य च प्रतियोग्यनुयोगिसापेक्षत्वेन तच्छब्दोपस्थितयोरेव तथात्वे नान्वयसम्भवात् । नच 'पश्यत्यन्यमीशम्' इत्यत्रान्यशब्दस्य द्वितीयान्तत्वात् 'अनश्नन्नन्यः' इति 'अन्य'शब्दस्य प्रथमान्तत्वात् एकप्रकारत्वाभावेनाभ्यासत्वानुपपत्तिरिति वाच्यम् । अभ्यासत्वेऽर्थत एवैकप्रकारत्वस्य तन्त्रत्वात् । अन्यथाऽतिप्रसङ्गात् । 'तयोरन्यः' 'अनश्नन्न्य' इत्यनयोः शब्दत एकप्रकारत्वेऽपि अर्थतः एकप्रकारत्वाभावेन त्वयैव तदभ्यासत्वस्य त्यागाच्च । नच 'द्वा सुपर्णा'इत्यादेः आत्मानात्माभेदपरत्वेनापि उपपत्त्या न जीवेश्वरभेदपरत्वमिति वाच्यम् । तथाऽपि जडाजडभेदसिद्ध्या वैरूप्यात् (सिद्ध्यवैकल्यात्-पा) ॥

ननु 'तयोरन्यः पिप्पलं स्वाद्वत्ति' इतिसत्त्वम् 'अनश्नन्नन्यो अभिचाकशीति' इति 'अनश्नन्नन्योऽभिपश्यत्यज्ञः' 'तावेतौ सत्त्वक्षेत्रज्ञौ' इति पैङ्गिरहस्यब्राह्मणेन 'तदेतत् सत्त्वं येन स्वप्नं पश्यति । अथ योऽयं शारीर उपद्रष्टा स क्षेत्रज्ञः' इति च ब्राह्मणेन सत्त्वक्षेत्रज्ञपदयोः, अन्तःकरणशरीरपरतया व्याख्यानान्न 'द्वा सुपर्णा' इत्यादिश्रुतिः जीवेश्वरयोर्भेदावेदनपरा इति चेन्न । तथाऽपि जडचेतनयोर्भेदावारणात् इत्युक्तत्वात् ॥

किञ्च व्याख्यानरूपवाक्यद्वयेऽपि 'सत्त्व'शब्दस्य 'घोरसत्त्वनिषेवितौ' (भा-१०-२७-१९) 'अन्यान् विनेष्यन्निव दुष्टसत्त्वान्नृपः ससत्त्वां महिषीममन्यत' इत्यादौ प्राणिष्वप्यविगानेन

प्रयुक्तत्वात्(प्रयुक्तस्य-पा), विनाऽस्य बाधकं जीवपरत्वत्यागायोगेन तदेतज्जीवस्वरूपरूपं सत्त्वम् इह 'सत्त्व'शब्दार्थः । 'येन कारणेन स्वप्नं पश्यति' इति व्याख्यानसम्भवेन च 'क्षेत्रज्ञ'शब्दस्यापि 'क्षेत्रज्ञं चापि मां विद्धि' (भ-गी-१३-३) इत्यादौ 'मामपि क्षेत्रज्ञं च विद्धि' इति 'क्षेत्रज्ञ'शब्दशक्तिग्राहकरूपवाक्ये परमात्मनोऽप्यर्थत्वाभिधानेन बाधकं विनाऽयोगेन वा(च) 'अथ योऽयं शरीरे जीवात्मनि स्थित्वोपद्रष्टा स क्षेत्रज्ञः' इति च परमात्मन्येव प्रकृते 'क्षेत्रज्ञ'शब्द इति तत्रैव व्युत्पादनेन च 'सत्त्व-क्षेत्रज्ञ'पदाभ्याम् 'अन्तःकरण-जीव'ग्रहणासिद्धेः । न च प्राणिवाचक'सत्त्व'शब्दस्य पुंलिङ्गत्वनियमात् व्याख्यारूपब्राह्मण-गतसत्त्वशब्दस्य प्राणिपरत्वानुपपत्तिरिति वाच्यम् । प्राणिवाचकस्यापि तस्य –

'सत्त्वं प्रकृतिजैर्मुक्तं यदेभिः स्यात् त्रिभिर्गुणैः ।
न तदस्ति पृथिव्यां वा दिवि देवेषु वा पुनः ।।'(भ-गी-१८-४०)

इत्यादौ नपुंसकत्वदर्शनात् । 'द्रव्यासुव्यवसायेषु सत्त्वमस्त्री तु जन्तुषु'(अ-को. वाग्वर्ग) इत्यभिधानेन तस्य नपुंसकत्वस्यापि सिद्धेश्च ।।

किञ्च 'पश्यत्यन्यमीशम्' इतीशद्रष्टृत्वेनोपस्थितजीवापेक्षयैव पदिन्यायेन(जै-सू-४-१-२९) दर्शनकर्मभूतेश्वरस्य अन्यत्वं युक्तम्, नत्वन्तःकरणादिजडापेक्षया । तस्यानुपस्थित्वात् । उपस्थितदर्शनकर्तृत्वत्यागापत्तेश्च । नच दर्शनकर्त्रप्यन्तःकरणमेवास्त्विति वाच्यम् । तथासति तस्यैव 'अस्य महिमानमिति वीतशोकः' इत्युत्तरवाक्योक्तमहिमापत्तेः, वीतशोकत्वप्रति-पादनानुपपत्तेश्च । एवम् उदाहृतवाक्यान्तरेष्वपि भेदपरत्वमुपक्रमाद्यन्यतमेन निश्चीयत इति, ततोऽपि जीवेश्वरभेदसिद्धिरविकला । एवमेव जडेशभेदसिद्धिरपि ।।

।। इति द्वासुपर्णा इति श्रुतेः भेदपरसमर्थनम् ।।

## ।। अथ अन्तर्यामिब्राह्मणात् भेदसाधनम् ।।

एवमन्तर्यामिब्राह्मणादपि तात्पर्यतः तद्भेदसिद्धिर्द्रष्टव्या । तथाहि (तत्रापि-पा) । तात्पर्यग्राहकस्य 'एवं वेत्थ नु त्वं काप्येतमन्तर्यामिणम्'(बृ-उ-५-७-१) इत्युपक्रमस्य 'एष त आत्माऽन्तर्यामि' इत्युपसंहारस्य, 'एष त आत्माऽन्तर्याम्यमृतः' इत्येकविंशति-

